WPP-47

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೭ | ಬೆಂಗಳೂರು, ಗುರುವಾರ, ಜುಲೈ ೨೬, ೨೦೧೨ (ಶ್ರಾವಣ ೪, ಶಕ ವರ್ಷ ೧೯೩೪) | ಸಂಚಿಕೆ ೩೦ |
|---|---|---|

## ಭಾಗ–೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್, ಪಂಚಾಯತ್ ರಾಜ್ ಇಂಜಿನೀಯರಿಂಗ್ ಉಪ ವಿಭಾಗ ಕಚೇರಿ , ಶಿರಸಿ.**

**ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರು, ಪಂಚಾಯತ್ ರಾಜ್ ಇಂಜಿನೀಯರಿಂಗ್ ಉಪ ವಿಭಾಗ ಕಾರ್ಯಾಲಯದ ಪ್ರಕಟಣೆ.**

**ಕ್ರ.ಸಂ.:ಪಂರಾಇಂ:ಉವಿ:ಶಿರಸಿ:12–13**

**ಪ್ರಕಟಣೆ**

2005ರ ಮಾಹಿತಿ ಹಕ್ಕು ಅಧಿನಿಯಮ (2005ರ ಕೇಂದ್ರ ಕಾಯಿದೆ 22)ರ ಅಡಿಯಲ್ಲಿ ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರು, ಪಂಚಾಯತ್ ರಾಜ್ ಇಂಜಿನೀಯರಿಂಗ್ ಉಪ ವಿಭಾಗ, ಶಿರಸಿ ಕಚೇರಿಯನ್ನು ಸಾರ್ವಜನಿಕ ಪ್ರಾಧಿಕಾರವೆಂದು ಪರಿಗಣಿಸಿ ಸರ್ಕಾರಿ ಆದೇಶ ಸಂಖ್ಯೆ: ಗ್ರಾ.ಅ.ಪ/324/ಕೆಎಸ್ಎಸ್/2005 ದಿನಾಂಕ: 23–9–2005ರ ಪ್ರಕಾರ ಹಾಗೂ ಸದರಿ ಅಧಿನಿಯಮದ 5(1) ಹಾಗೂ ಸೆಕ್ಷನ್–19(1) ಪ್ರಕಾರ ಈ ಕೆಳಗಿನವರನ್ನು ಸಾರ್ವಜನಿಕ ಮಾಹಿತಿ ಅಧಿಕಾರಿ ಹಾಗೂ ಮೇಲ್ಮನವಿ ಪ್ರಾಧಿಕಾರವೆಂದು ಗುರುತಿಸಿ ಆದೇಶಿಸಲಾಗಿದೆ.

| ಅ. ನಂ. | ಕಛೇರಿ ಮತ್ತು ಪೂರ್ಣ ವಿಳಾಸ | ಸಾರ್ವಜನಿಕ ಮಾಹಿತಿ ಅಧಿಕಾರಿ ಸೆಕ್ಷನ್–5 (1) | ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ ಸೆಕ್ಷನ್ – 5 (2) | ಮೇಲ್ಮನವಿ ಪ್ರಾಧಿಕಾರ ಸೆಕ್ಷನ್– 19(1) |
|---|---|---|---|---|
| 1 | ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರು, ಪಂಚಾಯತ್‌ರಾಜ್ ಇಂಜಿನೀಯರಿಂಗ್ ಉಪ ವಿಭಾಗ, ಶಿರಸಿ.(ಉ.ಕ.) | ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರು, ಪಂಚಾಯತ್‌ರಾಜ್ ಇಂಜಿನೀಯರಿಂಗ್ ಉಪ ವಿಭಾಗ, ಶಿರಸಿ.(ಉ.ಕ.) | ಪ್ರ.ದ.ಸ./ದ್ವಿ.ದ.ಸ. ಪಂ.ರಾ.ಇಂ. ಉಪ ವಿಭಾಗ, ಶಿರಸಿ. | ಅಧ್ಯಕ್ಷರು, ತಾಲೂಕ ಪಂಚಾಯತ್, ಶಿರಸಿ. |

**ಕೈಪಿಡಿ–1**

ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್ ಇವರು ಪಂಚಾಯತ್ ರಾಜ್ ಇಂಜಿನೀಯರಿಂಗ್ ಉಪ ವಿಭಾಗ, ಶಿರಸಿ ಕಛೇರಿಯ ಮುಖ್ಯಸ್ಥರಾಗಿರುತ್ತಾರೆ. ಇವರ ಅಧೀನದಲ್ಲಿ 4 ಶಾಖೆಗಳು ಕಾರ್ಯನಿರ್ವಹಿಸುತ್ತವೆ.

1) ತಾಂತ್ರಿಕ ಶಾಖೆ
2) ಆಡಳಿತ ಶಾಖೆ
3) ಲೆಕ್ಕ ಶಾಖೆ
4) ಉಗ್ರಾಣ ಶಾಖೆ

**1) ತಾಂತ್ರಿಕ ಶಾಖೆ:**

ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್‌ರವರು ಈ ಉಪ ವಿಭಾಗ ಕಾರ್ಯಾಲಯದ ತಾಂತ್ರಿಕ ವಿಷಯಗಳಿಗೆ ಸಂಬಂಧಪಟ್ಟ ಎಲ್ಲಾ ಕಾರ್ಯಗಳ ಕಾರ್ಯಭಾರವನ್ನು ಹೊಂದಿದ್ದು, ಇವರಿಗೆ ಸಹಾಯಕ್ಕಾಗಿ ಸಹಾಯಕ ಇಂಜಿನೀಯರರು–02 ಹುದ್ದೆ ಇರುತ್ತದೆ. ಅದರಲ್ಲಿ ಒಂದು ಹುದ್ದೆ ಖಾಲಿ ಇರುತ್ತದೆ. ಕಿರಿಯ ಇಂಜಿನೀಯರರು–6, ಅದರಲ್ಲಿ 2 ಹುದ್ದೆ ಖಾಲಿ ಇರುತ್ತದೆ. ಕೆಲಸ ನಿರೀಕ್ಷಕರು–04 ,ಅದರಲ್ಲಿ ಮೂರು ಹುದ್ದೆ ಖಾಲಿಇರುತ್ತದೆ.

1) ಉದ್ದೇಶಿಸಿರುವ ರಸ್ತೆ, ಸೇತುವೆ ಮತ್ತು ಕಟ್ಟಡ ಕಾಮಗಾರಿಗಳ ನಿರ್ಮಾಣ ಹಾಗೂ ನಿರ್ವಹಣೆ ಹಾಗೂ ಪರಿವೀಕ್ಷಣೆ ಹಾಗೂ ತಾಂತ್ರಿಕವಾಗಿ ಪರಿಶೀಲಿಸುವದು.

2) ಅಂದಾಜು ಪಟ್ಟಿ ಹಾಗೂ ವಿನ್ಯಾಸಗಳನ್ನು ತಯಾರಿಸಿ ಆಡಳಿತಾತ್ಮಕ ಅನುಮೋದನೆಗಾಗಿ ಹಾಗೂ ತಾಂತ್ರಿಕ ಮಂಜೂರಾತಿಗಾಗಿ ವಿಭಾಗ ಕಛೇರಿಗೆ ಸಲ್ಲಿಸುವದು.

3) ಯೋಜನೆಗಳ ಅನುಷ್ಠಾನದ ಪ್ರಗತಿ ಪತ್ರಿಕೆಗಳನ್ನು ತಯಾರಿಸಿ ವಿಭಾಗ ಕಛೇರಿಗೆ ಸಲ್ಲಿಸುವದು.

4) ಜಿಲ್ಲಾ ಪಂಚಾಯತ್ ಕಾರ್ಯಾಲಯದಲ್ಲಿ ನಡೆಯುವ ಸಭೆಗಳಿಗೆ ಪ್ರಗತಿ ವರದಿ ತಯಾರಿಸುವುದು ಮತ್ತು ಹಾಜರಾಗುವದು.

5) ಕಾಮಗಾರಿಗಳ ಕಾರ್ಯಕ್ರಮ ಪಟ್ಟಿ ತಯಾರಿಸುವದು ಹಾಗೂ ಅನುಮೋದನೆ ಪಡೆಯುವದು.

6) ತಾಲ್ಲೂಕು ಮಟ್ಟದ ಕೆ.ಡಿ.ಪಿ. ಸಭೆಗೆ ಪ್ರಗತಿ ವರದಿ ತಯಾರಿಸುವುದು ಹಾಗೂ ಹಾಜ ರಾಗುವದು.

7) ಯೋಜನೆಗಳ ಬಿಲ್ಲುಗಳನ್ನು ನಮೂದಿಸಿ ತಯಾರಿಸಿ ವಿಭಾಗ ಕಛೇರಿಗೆ ಸಲ್ಲಿಸುವದು.

**ಕೈಪಿಡಿ–2**

**ಸಂಸ್ಥೆಯ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದ ಅಧಿಕಾರಿ ಮತ್ತು ವಿಧಿಗಳ ವಿವರ.**

ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್, ಪಂಚಾಯತ್ ರಾಜ್ ಇಂಜಿನೀಯರಿಂಗ್ ಉಪ ವಿಭಾಗ, ಶಿರಸಿ ಇವರು ಉಪ ವಿಭಾಗದ ಮುಖ್ಯಸ್ಥರಿದ್ದು, ಇವರು ಕಾರ್ಯನಿರ್ವಾಹಕ ಇಂಜಿನೀಯರ್, ಪಂಚಾಯತ್ ರಾಜ್ ಇಂಜಿನೀಯರಿಂಗ್ ವಿಭಾಗ , ಶಿರಸಿ ಇವರ ಅಧೀನದಲ್ಲಿ ಕೆಲಸ ನಿರ್ವಹಿಸುತ್ತಾರೆ.

**ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್‌ರವರ ಕಾರ್ಯಭಾರ ಈ ಕೆಳಗಿನಂತಿರುತ್ತದೆ.**

1) ಪ್ರತಿಯೊಂದು ಉಪ ವಿಭಾಗದ ಮುಖ್ಯಸ್ಥರಾಗಿ ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರರವರು ಇರುತ್ತಾರೆ. ಇವರು ಉಪ ವಿಭಾಗದ ಕಾಮಗಾರಿಗಳ ಶೇ.100ರಷ್ಟು ಪರಿಶೀಲನೆ ಮಾಡಬೇಕಾಗುತ್ತದೆ.

2) ಮೇಲಾಧಿಕಾರಿಗಳು ನೀಡಿರುವ ತಪಾಸಣೆಯ ಟಿಪ್ಪಣಿಗಳಿಗೆ ತ್ವರಿತವಾಗಿ ಅನುಸರಣಾ ವರದಿಯನ್ನು ನಿಯಮಾವಳಿಗಳಂತೆ ಸಲ್ಲಿಸುವದು.

3) ಉಪ ವಿಭಾಗದ ಸಿಬ್ಬಂದಿ, ಲೆಕ್ಕ ವಿಚಾರಗಳು ಮತ್ತು ತಾಂತ್ರಿಕ ವಿಚಾರಗಳು , ಉಗ್ರಾಣದ ಲೆಕ್ಕ ವಿಚಾರಗಳು ಈ ಎಲ್ಲವನ್ನು ನಿರ್ವಹಿಸುವಲ್ಲಿ ಅವರೇ ಜವಾಬ್ದಾರರಾಗಿರುತ್ತಾರೆ.

4) ಅವರ ಅಧೀನದಲ್ಲಿ ಪ್ರಥಮ ದರ್ಜೆ ಸಹಾಯಕರು, ದ್ವಿತೀಯ ದರ್ಜೆ ಸಹಾಯಕರು, ಸಹಾಯಕ ಇಂಜಿನೀಯರು, ಕಿರಿಯ ಇಂಜಿನೀಯರು, ಬೆರಳಚ್ಚುಗಾರರು ಉಪ ವಿಭಾಗದ ಕೆಲಸಗಳನ್ನು ಜವಾಬ್ದಾರಿಯುತರಾಗಿ ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್ ರವರಿಗೆ ಕೆಲಸ ನಿರ್ವಹಿಸಲು ಸಹಾಯಕರಾಗಿರುತ್ತಾರೆ.

5) ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರರು, ಕಾರ್ಯನಿರ್ವಾಹಕ ಇಂಜಿನೀಯರ್‌ರವರಿಗೆ ಮಾಹಿತಿಯನ್ನು ನಿಗದಿತ ದಿನಾಂಕದೊಳಗೆ ಎಲ್ಲಾ ನಿಯತಕಾಲಿಕೆಗಳನ್ನು ನಿಯಮಾನುಸಾರ ಸಲ್ಲಿಸಲು ಕ್ರಮ ತೆಗೆದುಕೊಳ್ಳುವುದು.

6) ಕಾಮಗಾರಿಗಳ ಅಂದಾಜು ತಯಾರಿಕೆ , ಕರಡು ಟೆಂಡರ್ ಪತ್ರಗಳ ತಯಾರಿಕೆ, ಗುತ್ತಿಗೆದಾರರಿಗೆ ನಿವೇಶನ ಇತರೇ ಕಾಮಗಾರಿಗಳ ಮಾರ್ಕ ಔಟ್ ಮಾಡುವ ಬಗ್ಗೆ ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರವರು ಕ್ರಮ ತೆಗೆದುಕೊಳ್ಳಬೇಕಾಗುತ್ತದೆ.

ಸಹಾಯಕ ಇಂಜಿನೀಯರ್/ಕಿರಿಯ ಇಂಜಿನೀಯರ್‌ರವರುಗಳು ತಾಂತ್ರಿಕ ವಿಚಾರಗಳು, ಶಾಖಾ ಲೆಕ್ಕಗಳು, ಟಿ ಮತ್ತು ಪಿ ಲೆಕ್ಕಗಳು, ಎಂ.ಇ.ಎಸ್. ಲೆಕ್ಕಗಳು ಮತ್ತು ಇತರೇ ವಾಹನಗಳ ಲೆಕ್ಕಗಳನ್ನು ನಿರ್ವಹಿಸುವರು. ಇವರುಗಳು ಬಿಲ್ಲು ತಯಾರಿಕೆಗಳನ್ನು ನಿರ್ವಹಿಸುವುದು ಅಲ್ಲದೇ ಪುಸ್ತಕಗಳಲ್ಲಿ ಕಾಮಗಾರಿಗಳ ವಿವರಗಳನ್ನು ಮತ್ತು ಅಳತೆಗಳನ್ನು ನಮೂದಿಸಿ ಗುತ್ತಿಗೆದಾರರಿಗೆ ಬಿಲ್ಲು ಪಾವತಿಸುವಲ್ಲಿ ಸರ್ಕಾರವು ನಿಗದಿಪಡಿಸಿದ ಸಮಯದೊಳಗೆ ಪಾವತಿಯಾಗುವಂತೆ ಕ್ರಮ ತೆಗೆದುಕೊಳ್ಳುವುದು.

**ಕೈಪಿಡಿ–3**

ನಿರ್ಣಯ ತೆಗೆದುಕೊಳ್ಳುವಲ್ಲಿ ಪಾಲಿಸಬೇಕಾದ ವಿಧಿ ವಿಧಾನಗಳು ಮತ್ತು ಪರಿವೀಕ್ಷಣೆ ಹಾಗೂ ಜವಾಬ್ದಾರಿ ವಿವರಗಳು ಇಲಾಖೆಯು ಕಾಮಗಾರಿಗೆ ಸಂಬಂಧಪಟ್ಟ ಕಾರ್ಯನಿರ್ವಹಿಸುವಲ್ಲಿ

ಲೋಕೋಪಯೋಗಿ ಇಲಾಖೆಯ ಸಂಹಿತೆ ಭಾಗ–1 ಮತ್ತು ಭಾಗ–2 ಕರ್ನಾಟಕ ಪಾರದರ್ಶಕ ನಿಯಮ.

ಲೋಕೋಪಯೋಗಿ ಲೆಕ್ಕ ಸಂಹಿತೆ ಭಾಗ–1 ಮತ್ತು ಭಾಗ–2ನ್ನು ಅನುಸರಿಸಲಾಗುವುದು.

ಭೂ ಸ್ವಾಧೀನ ಕಾಯ್ದೆ

ಉಗ್ರಾಣ ಕೈಪಿಡಿ

ಮಧ್ಯಸ್ಥಿಕೆ ಕಾಯ್ದೆಗಳನ್ನು ಅನುಸರಿಸಲಾಗುತ್ತಿದೆ.

ಆಡಳಿತವನ್ನು ನಿರ್ವಹಿಸಲು

ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳು

ಕರ್ನಾಟಕ ಆರ್ಥಿಕ ಸಂಹಿತೆ

ಕರ್ನಾಟಕ ಖಜಾನಾ ಸಂಹಿತೆ

ಕರ್ನಾಟಕ ನಾಗರಿಕ ಸೇವಾ (ನಡತೆ) ನಿಯಮಗಳು ಇವುಗಳನ್ನು ಅನುಸರಿಸಲಾಗುತ್ತಿದೆ.

**2. ಆಡಳಿತ ಶಾಖೆ:**

ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್, ಪಂಚಾಯತ್ ರಾಜ್ ಇಂಜಿನೀಯರಿಂಗ್ ಉಪ ವಿಭಾಗ ಶಿರಸಿ ಕಛೇರಿಯಲ್ಲಿ ಮಂಜೂರಾದ ಹುದ್ದೆಗಳು ಒಟ್ಟೂ 21 ಇದ್ದು, ಇವುಗಳಲ್ಲಿ ಒಟ್ಟೂ 13 ಜನ ಸಿಬ್ಬಂದಿ ಗಳು ಕಾರ್ಯನಿರ್ವಹಿಸುತ್ತಿದ್ದಾರೆ. ಈ ಸಂಖ್ಯೆಗಳ ಪೈಕಿ ಹಾಲಿ ಕಾರ್ಯನಿರ್ವಹಿಸುತ್ತಿರುವ ವರ್ಗ–ಎ–1, ವರ್ಗ–ಬಿ–1 , ವರ್ಗ–ಸಿ–9, ವರ್ಗ–ಡಿ–2ಹುದ್ದೆಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ.

ಆಡಳಿತ ಶಾಖೆಯಲ್ಲಿ ಇಬ್ಬರು ದ್ವಿತೀಯ ದರ್ಜೆ ಸಹಾಯಕರು ಕಾರ್ಯನಿರ್ವಹಿಸುತ್ತಿದ್ದು, ಇವರಲ್ಲಿ ಒಬ್ಬರು ಆಡಳಿತಕ್ಕೆ ಸಂಬಂಧಪಟ್ಟಂತೆ ನೌಕರರ ಸೇವಾ ವಿವರಗಳು, ಸಿಬ್ಬಂದಿ ವೇತನ ಬಿಲ್ಲು, ವಿದ್ಯುಚ್ಛಕ್ತಿ ಮತ್ತು ದೂರವಾಣಿ ಬಿಲ್ಲು ಹಾಗೂ ಸದರಿ ನೌಕರರ ರಜೆ ಇತ್ಯಾದಿಗಳ ನಿರ್ವಹಣೆ ಮತ್ತು ಸಿಬ್ಬಂದಿಗೆ ಸಂಬಂಧಪಟ್ಟ ನಿಯತಕಾಲಿಕೆಗಳನ್ನು ಸಲ್ಲಿಸುವ ಕಾರ್ಯಗಳನ್ನು ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರವರ ಆದೇಶಗಳ ಮೇರೆಗೆ ಕಾರ್ಯನಿರ್ವಹಿಸುತ್ತಾರೆ. ಈ ಆಡಳಿತ ಶಾಖೆಯಲ್ಲಿ ನಿರ್ವಹಿಸುವ ಸಂಕ್ಷಿಪ್ತ ಕೆಲಸಗಳ ವಿವರಗಳನ್ನು ಈ ಕೆಳಕಂಡಂತೆ ನೀಡಲಾಗಿದೆ.

1) ಆಡಳಿತ ಶಾಖೆಯು ಆಡಳಿತಕ್ಕೆ ಸಂಬಂಧಪಟ್ಟಂತೆ ನೌಕರರ ಸೇವಾ ವಿವರಗಳ ಹಾಗೂ ಬಡ್ತಿಗಳ ಮತ್ತು ನಿವೃತ್ತಿ, ಪಿಂಚಣಿ, ರಜೆ ವಗೈರೆಗಳಿಗೆ ಸಂಬಂಧಿಸಿದಂತೆ ದಾಖಲೆಗಳನ್ನು ಸಲ್ಲಿಸುವದು ಮತ್ತು ನಿರ್ವಹಿಸುವುದು.

2) ಸಿಬ್ಬಂದಿ ವರ್ಗದ ವೇತನ ಬಿಲ್ಲುಗಳನ್ನು ಹಾಗೂ ಸಾದಿಲ್ವಾರು ಬಿಲ್ಲುಗಳನ್ನು ಸಿದ್ಧಪಡಿಸುವುದು ಮತ್ತು ಸಂಬಂಧಪಟ್ಟಂತೆ ಅನುದಾನ ವಗೈರೆಗಳನ್ನು ಬಿಲ್ಲುಗಳಿಗೆ ಸಕ್ಷಮ ಅಧಿಕಾರಿಯ ಅನುಮೋದನೆ ಪಡೆದ ನಂತರವೇ ನಗದೀಕರಣಕ್ಕೆ ಸಲ್ಲಿಸುವುದು.

3) ನೌಕರರ ವಾರ್ಷಿಕ ವರದಿಗಳಾದ ಆಸ್ತಿ ಮತ್ತು ಹೊಣೆಗಾರಿಕೆ ಪಟ್ಟಿ ಹಾಗೂ ಕಾರ್ಯನಿರ್ವಹಣಾ ವರದಿಗಳನ್ನು ನೌಕರರಿಂದ ಪಡೆದು ಮೇಲಾಧಿಕಾರಿಗಳ ಅವಗಾಹನೆಗೆ ಸಲ್ಲಿಸುವುದು.

4) ಆಡಳಿತಕ್ಕೆ ಸಂಬಂಧಿಸಿದಂತೆ ಉಪ ವಿಭಾಗದ ಆಯವ್ಯಯ ಅಂದಾಜು ಪಟ್ಟಿಯ ವಿವರಗಳನ್ನು ಮೇಲಾಧಿಕಾರಿಗಳಿಗೆ ಸಲ್ಲಿಸಲು ಸಿದ್ಧಪಡಿಸುವದು.

5) ಆಡಳಿತ ಶಾಖೆಯ ಇನ್ನೊಬ್ಬ ದ್ವಿತೀಯ ದರ್ಜೆ ಸಹಾಯಕರು ಕಛೇರಿಗೆ ಬರುವ ಮತ್ತು ಕಛೇರಿಯಿಂದ ಹೋಗುವ ಪತ್ರಗಳ ಸ್ವೀಕೃತಿ ಮತ್ತು ರವಾನೆ ಕಾರ್ಯದೊಂದಿಗೆ ವಿಭಾಗ ಕಛೇರಿಯಿಂದ ನೀಡುವ ಅಳತೆ ಪುಸ್ತಕಗಳು, ನಾಮಾಂಕಿತ ಸಮುದಾಯ ಹಾಜರಾತಿ ಪಟ್ಟಿ ಇವುಗಳ ದಾಖಲೆಗಳ ನಿರ್ವಹಣೆ ಹಾಗೂ ಅಂಚೆ ಚೀಟಿಗಳ ದಾಸ್ತಾನು ನಿರ್ವಹಣೆ ನಿರ್ವಹಿಸುತ್ತಾರೆ. ಇದರೊಂದಿಗೆ ವಾರ್ಷಿಕ ತಪಾಸಣಾ ವರದಿಗಳಿಗೆ ಪಾಲನಾ ವರದಿಯನ್ನು ಕ್ರೂಢೀಕರಿಸಿ ಸಲ್ಲಿಸುವ ಕಾರ್ಯನಿರ್ವಹಿಸುತ್ತಾರೆ.

**3. ಲೆಕ್ಕಪತ್ರ ಶಾಖೆ:**

ಈ ಶಾಖೆಯಲ್ಲಿ ಒಬ್ಬ ಪ್ರಥಮ ದರ್ಜೆ ಸಹಾಯಕರು ಕೆಲಸ ನಿರ್ವಹಿಸುತ್ತಾರೆ. ಈ ಉಪ ವಿಭಾಗಕ್ಕೆ ಸಂಬಂಧಪಟ್ಟಂತೆ ಈ ಹುದ್ದೆಯು ಖಾಲಿಯಿದ್ದು, ಹಾಲಿ ಇರುವ ದ್ವಿತೀಯ ದರ್ಜೆ ಸಹಾಯಕರೇ ಹೆಚ್ಚುವರಿಯಾಗಿ ಈ ಹುದ್ದೆಗೆ ಸಂಬಂಧಿಸಿದ ಕಾಮಗಾರಿಗಳ ನಗದು ಪುಸ್ತಕಗಳ ನಿರ್ವಹಣೆ , ಬಾಕಿ ಬಿಲ್ಲುಗಳ ಪರಿಶೀಲನೆಯೊಂದಿಗೆ ವಿಭಾಗ ಕಛೇರಿಗೆ ಸಲ್ಲಿಸುವುದು. ಹಣ ಭರವಸೆ ಪತ್ರ , ಬೇಡಿಕೆ ಪತ್ರ ಸಲ್ಲಿಸುವುದು. ಇದಲ್ಲದೇ ಲೆಕ್ಕಪತ್ರ ಶಾಖೆಗೆ ಸಂಬಂಧಿಸಿದ ಎಲ್ಲಾ ಪತ್ರ ವ್ಯವಹಾರಗಳನ್ನು ನಿರ್ವಹಿಸುವುದು.

4. ಉಗ್ರಾಣ ಶಾಖೆ:

ಈ ಇಲಾಖೆಯಲ್ಲಿ ಒಬ್ಬ ದ್ವಿತೀಯ ದರ್ಜೆ ಸಹಾಯಕರು ಕೆಲಸ ನಿರ್ವಹಿಸುತ್ತಿದ್ದಾರೆ. ದಾಸ್ತಾನು ಸಾಮಗ್ರಿ ಗಳ ಹಾಗೂ ಯಂತ್ರೋಪಕರಣ ಸಾಮಗ್ರಿಗಳು ಹಾಗೂ ಸ್ಥಿರ ಸಾಮಗ್ರಿಗಳ ಪತ್ರ ವ್ಯವಹಾರ ಹಾಗೂ ಅವಶ್ಯವಿದ್ದಲ್ಲಿ ವಿಭಾಗ ಕಛೇರಿಗೆ ಬೇಡಿಕೆ ಪತ್ರ ಸಲ್ಲಿಸುವದು. ಕಛೇರಿಗೆ ಅವಶ್ಯವಿರುವ ಲೇಖನಿ ಸಾಮಗ್ರಿಗಳನ್ನು ಖರೀದಿಸುವದು. ನಿರುಪಯುಕ್ತ ಸಾಮಗ್ರಿಗಳ ಬಗ್ಗೆ ಸರ್ವೆ ವರದಿಯನ್ನು ಸಲ್ಲಿಸುವುದು. ಉಗ್ರಾಣಕ್ಕೆ ಸಂಬಂಧ ಪಟ್ಟ ಲೆಕ್ಕಪತ್ರ ಮಾಹಿತಿಗಳನ್ನು ವಿಭಾಗ ಕಛೇರಿಗೆ ಸಲ್ಲಿಸುವುದು.

ಈ ಇಲಾಖೆಯಲ್ಲಿ ನಿರ್ವಹಿಸಲ್ಪಡುವ ಎಲ್ಲಾ ಕಾಮಗಾರಿಗಳನ್ನು ಕರ್ನಾಟಕ ಪಾರದರ್ಶಕ ನಿಯಮದ ಅನುಸಾರ ಟೆಂಡರ್ ಕರೆದು ಗುತ್ತಿಗೆದಾರರಿಗೆ ನೀಡಲಾಗುತ್ತಿದೆ. ಗುತ್ತಿಗೆದಾರರನ್ನು ನಿಗದಿಪಡಿಸಿದ ನಂತರ ಅವರಿಗೆ ಕಾರ್ಯಾದೇಶ ನೀಡಲಾಗುತ್ತಿದೆ. ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರರು ಗುತ್ತಿಗೆದಾರರಿಗೆ ನಿವೇಶನವನ್ನು ಹಸ್ತಾಂತರಿಸಿ ಕೆಲಸವನ್ನು ಅನುಷ್ಠಾನಗೊಳಿಸಲು ಮಾರ್ಕ ಔಟ್ ನೀಡಿ ಕೆಲಸ ಚಾಲನೆ ಮಾಡುತ್ತಾರೆ. ಸಂಬಂಧಿಸಿದ ಸಹಾಯಕ/ಕಿರಿಯ ಇಂಜಿನೀಯರರು ದೈನಂದಿನ ನಿವೇಶನಕ್ಕೆ ಹೋಗಿ ಕೆಲಸದ ಉಸ್ತುವಾರಿಯನ್ನು ನೋಡಿಕೊಳ್ಳುತ್ತಾರೆ. ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್‌ರವರು ಆಗಿದ್ದಾಗ್ಗೆ ನಿವೇಶನಕ್ಕೆ ಭೇಟಿ ನೀಡಿ ಕೆಲಸವನ್ನು ಪರಿವೀಕ್ಷಿಸುತ್ತಾರೆ. ಹಾಗೆಯೇ ಕಾರ್ಯನಿರ್ವಾಹಕ ಇಂಜಿನೀಯರರು, ಅಧೀಕ್ಷಕ ಇಂಜಿನೀಯರು, ಮುಖ್ಯ ಇಂಜಿನೀಯರರು ನಿವೇಶನಕ್ಕೆ ಭೇಟಿ ನೀಡಿ ಸಲಹೆ ಸೂಚನೆಗಳನ್ನು ನೀಡುತ್ತಾರೆ. ಪ್ರಗತಿಯನ್ನು ಪರಿಶೀಲಿಸಲು ಕಾರ್ಯನಿರ್ವಾಹಕ ಇಂಜಿನೀಯರರು , ಅಧೀಕ್ಷಕ ಇಂಜಿನೀಯರರು ಮತ್ತು ಮುಖ್ಯ ಇಂಜಿನೀಯರರ ಮಟ್ಟದಲ್ಲಿ ಸಭೆ ನಡೆಸಲಾಗುತ್ತದೆ.

ಅಕೌಂಟ್ ಟೆಬಿಲಿಟಿ ಬಗ್ಗೆ ಮಹಾಲೇಖಪಾಲಕರು 2 ವರ್ಷಕ್ಕೊಮ್ಮೆ ಸಂಬಂಧಿತ ಉಪ ವಿಭಾಗ ಕಛೇರಿಗಳ ಪರಿವೀಕ್ಷಣೆ ಮಾಡುತ್ತಾರೆ. ಅಲ್ಲದೇ ಮುಖ್ಯ ಇಂಜಿನೀಯರರವರ ಕಛೇರಿ, ಅಧೀಕ್ಷಕ ಇಂಜಿನೀಯರವರ ಕಛೇರಿ , ಕಾರ್ಯನಿರ್ವಾಹಕ ಇಂಜಿನೀಯರವರ ಕಛೇರಿಯಿಂದಲೂ ಉಪ ವಿಭಾಗಗಳ ತಪಾಸಣೆ ನಡೆಯುತ್ತದೆ. ಕಳಪೆ ಕಾಮಗಾರಿಗಳ ಬಗ್ಗೆ ಏನಾದರೂ ಅರ್ಜಿ ಬಂದಲ್ಲಿ ಮಾನ್ಯ ಲೋಕಾಯುಕ್ತರು ಕೂಡ ನಿವೇಶನವನ್ನು ಪರಿಶೀಲನೆ ಮಾಡಿ ಏನಾದರೂ ಕಳಪೆ ಕಾಮಗಾರಿಗಳಿದ್ದಲ್ಲಿ ಸೂಕ್ತ ಕ್ರಮಕ್ಕೆ ಶಿಫಾರಸ್ಸು ಮಾಡುತ್ತಾರೆ.

ಕೈಪಿಡಿ–4

ಕರ್ತವ್ಯಗಳ ನಿರ್ವಹಣೆಯಲ್ಲಿ ಪಾಲಿಸಬೇಕಾದ ಸೂತ್ರಗಳು

ಲೋಕೋಪಯೋಗಿ ಇಲಾಖೆ ಮತ್ತು ನೀರಾವರಿ ಇಲಾಖೆಯ ಅಧಿಕಾರಿಗಳ ಆರ್ಥಿಕ ಅಧಿಕಾರ ಪ್ರತ್ಯಾಯೋಜನೆ ಸರ್ಕಾರಿ ಆದೇಶ ಸಂಖ್ಯೆ:ಪಿಡಬ್ಲ್ಯೂ–1/ಎಫ್‌ಸಿಆರ್ 93/ಬೆಂಗಳೂರು ದಿನಾಂಕ: 15–12–1994

ಸಾಮಾನ್ಯ ಆರ್ಥಿಕ ಅಧಿಕಾರ ಪ್ರತ್ಯಾಯೋಜನೆ

ಸರ್ಕಾರಿ ಆದೇಶ ಸಂಖ್ಯೆ:ಎಫ್‌ಡಿ–1/ಟಿಎಫ್‌ಪಿ 2001 ಬೆಂಗಳೂರು ದಿನಾಂಕ: 02–02–2001

ಲೋಕೋಪಯೋಗಿ ಇಲಾಖೆ ಸಂಹಿತೆ

ಲೋಕೋಪಯೋಗಿ ಇಲಾಖೆ ಆರ್ಥಿಕ ಸಂಹಿತೆ

ಕೈಪಿಡಿ–5

ಇಲಾಖೆಯ ಅಧೀನದಲ್ಲಿರುವ ಮತ್ತು ಸಿಬ್ಬಂದಿ ಉಪಯೋಗಿಸುತ್ತಿರುವ ನಿಯಮಗಳು, ವಿನಿಮಯಗಳು, ಸೂಚನೆಗಳು, ದಾಖಲೆಗಳು ಕೈಪಿಡಿಗಳ ವಿವರ.

ಕಛೇರಿ ಕೈಪಿಡಿ ನಿಯಮಗಳು, ವಿನಿಮಯಗಳು ಮತ್ತು ಸೂಚನೆಗಳು

ಕರ್ನಾಟಕ ನಾಗರಿಕ ಸೇವಾ ನಿಯಮಗಳು

ಕರ್ನಾಟಕ ಸರ್ಕಾರಿ (ವರ್ಗೀಕರಣ,ನಿಯಂತ್ರಣ ಮತ್ತು ಅಪೀಲು ನಿಯಮಗಳು)

ಕರ್ನಾಟಕ ಆರ್ಥಿಕ ಸಂಹಿತೆ

ಲೋಕೋಪಯೋಗಿ ಲೆಕ್ಕ ಸಂಹಿತೆ ಭಾಗ–1 ಮತ್ತು ಭಾಗ–2ನ್ನು ಅನುಸರಿಸಲಾಗುವುದು.

ಉಗ್ರಾಣ ಕೈಪಿಡಿ

ಸಾದಿಲ್ವಾರು ವೆಚ್ಚದ ಕೈಪಿಡಿ

ಕರ್ನಾಟಕ ಖಜಾನೆ ಸಂಹಿತೆ

ಚಾಲ್ತಿ ದರಪಟ್ಟಿ

ಬಜೆಟ್ ಕೈಪಿಡಿ

**ಕೈಪಿಡಿ–6**

ಇಲಾಖೆಯ ಅಧೀನದಲ್ಲಿರುವ ವರ್ಗೀಕರಣದ ತ:ಖ್ತೆ

**ತಾಂತ್ರಿಕ ಶಾಖೆ:**

1) ಕಾರ್ಯನಿರ್ವಾಹಕ ಇಂಜಿನೀಯರವರ , ಅಧೀಕ್ಷಕ ಇಂಜಿನೀಯರವರ ಮತ್ತು ಮುಖ್ಯ ಇಂಜಿನೀಯರವರ ಮಟ್ಟದಲ್ಲಿ ಮಂಜೂರಾದ ಅಂದಾಜು ಪತ್ರಿಕೆಗಳು ಮತ್ತು ಅದಕ್ಕೆ ಸಂಬಂಧಪಟ್ಟ ಕಡತಗಳು.

2) ಪ್ರಗತಿಯ ವರದಿಗಳು

3) ಆಯವ್ಯಯಕ್ಕೆ ಸಂಬಂಧಪಟ್ಟ ಆಯವ್ಯಯ ಪ್ರಸ್ತಾವನೆ ಮತ್ತು ಆಯವ್ಯಯ ಪಟ್ಟಿ

4) ಭಾರಿ ಹಾಗೂ ಸಣ್ಣ ಅಂದಾಜುಗಳ ಮಂಜೂರಾತಿ ವಹಿ

5) ದರ ಸೂಚಿಕ

6) ಆಯವ್ಯಯ ಕಾಮಗಾರಿಗಳ ವಹಿ

7) ಮೇಲಾಧಿಕಾರಿಗಳಿಂದ ಮಂಜೂರಾದ ಅಂದಾಜುಗಳ ಪಟ್ಟಿ

**ಪಿ.ಬಿ.ಯಲ್ಲಿರುವ ರಜಿಸ್ಟರ್ ಮಾಹಿತಿ**

1) ತುಂಡು ಗುತ್ತಿಗೆ ಪತ್ರ ಅನುಮೋದನೆ ರಜಿಸ್ಟರ್

2) ಮೇಲಾಧಿಕಾರಿಗಳಿಂದ ಮಂಜೂರಾದ ಅಂದಾಜುಗಳ ಪಟ್ಟಿ

**ದಾಖಲೆಗಳು: ಆಡಳಿತ ಶಾಖೆ**

ಉಪ ವಿಭಾಗ ಕಛೇರಿಯ ತಪಾಸಣೆಗೆ ಅಗತ್ಯವಿರುವ ವಹಿಗಳು ಮತ್ತು ದಾಖಲಾತಿಗಳ ಪಟ್ಟಿ

1) ಹಾಜರಾತಿ ವಹಿ

2) ಪತ್ರಾಂಕಿತವಲ್ಲದ ಅಧಿಕಾರಿಗಳ ಸಾಂದರ್ಭಿಕ ರಜೆ ಮತ್ತು ಸಾಂದರ್ಭಿಕ ರಜೆ ಕಡತ ಅರ್ಜಿಗಳೊಂದಿಗೆ

3) ಸಂಘಟನಾ

4) ಮಂಜೂರಾದ ಕಾರ್ಯನಿರ್ವಹಿಸುತ್ತಿರುವ ಮತ್ತು ಖಾಲಿ ಹುದ್ದೆಗಳ ತ:ಖ್ತೆ

5) ಕೆಲಸ ವಿತರಣಾ ತ:ಖ್ತೆ

6) ವೇತನ ಬಡ್ತಿಯ ನಿಗಾ ವಹಿ

7) ವೇತನ ಬಡ್ತಿಯ ಮಂಜೂರಾತಿ ವಹಿ

8) ಇನ್‌ಕಂಟೆನ್ಸಿ ವಹಿ

9) ರಹಸ್ಯ ವರದಿಗಳ ವಹಿ

10) ಆಸ್ತಿ ಮತ್ತು ದಾಜಿಜತ್ವ ತ:ಖ್ತೆ ವಹಿ

11) ಮಹಾಲೇಖಪಾಲರು ಮತ್ತು ಇತರರಿಗೆ ಕಳುಹಿಸಲಾದ ನಿವೃತ್ತಿ ವೇತನ ಪತ್ರಗಳ ನಿಗಾವಹಿ

12) ಸೇವಾವಹಿ

13) ಇಲಾಖಾ ಪರೀಕ್ಷೆಗಳ ನಿಗಾ ವಹಿ

14) ಪರಿವೀಕ್ಷಣಾ ಟಿಪ್ಪಣಿ ಪುಸ್ತಕ

15) ಕಛೇರಿ ನೌಕರರ ಮನೆಗಳ ವಿಳಾಸ

16) ವಿಧಾನ ಸಭೆ/ಪರಿಷತ್ ಪ್ರಶ್ನೆಗಳ ವಹಿ

17) ವೈಯಕ್ತಿಕ ವಹಿ

18) ಪ್ರತಿ ಮಾಹೆಗಳ ಬಾಕಿ ಪಟ್ಟಿ

19) ಸ್ಟಾಂಪು ವಹಿ ಪರಿವೀಕ್ಷಣಾ ದಿನದಂದು ಬಾಕಿ ಇರುವ ಸ್ಟಾಂಪುಗಳ ಮತ್ತು ಸ್ಟಾಂಪುಗಳ ಬೆಲೆಯನ್ನು ತೋರಿಸುವ ತ:ಖ್ತೆ

20) ಸಾಮಾನ್ಯ ಸ್ವೀಕೃತಿ ವಹಿ

21) ರವಾನೆ ವಹಿ

22) ಸ್ಥಳೀಯ ವಿತರಣಾ ರವಾನೆ

23) ಕಛೇರಿ ಆದೇಶ ಪುಸ್ತಕ

24) ಸಾಮಾನ್ಯ ನಗದು ಪುಸ್ತಕ

25) ವೇತನ ಬಟವಡೆ ವಹಿ

26) ಪ್ರಯಾಣ ಭತ್ಯೆ ಬಟವಡೆ ವಹಿ

27) ಸಾದಿಲ್ವಾರು ವೆಚ್ಚ ವಹಿ ವೋಚರ್ ಗಳ ಸಂಹಿತೆ

**ಲೆಕ್ಕಪತ್ರ ಶಾಖೆ:**

1) ನಗದು ಪುಸ್ತಕ

2) ಚೆಕ್‌ಮೆಮೊ ಪುಸ್ತಕ

3) ಎಲ್.ಓ.ಸಿ.ರಜಿಸ್ಟರ್

4) ರೆಮಿಟನ್ಸ್ ರಜಿಸ್ಟರ್

5) ಚೆಕ್ ರಿಸೀವ್ಡ್ ರಜಿಸ್ಟರ್

6) ಎಸ್.ಬಿ.ಆರ್.ರಜಿಸ್ಟರ್

7) ಖಾಲಿ ಅಳತೆ ಪುಸ್ತಕಗಳ ವಹಿ

8) ಎಂ.ಪಿ.ಡಬ್ಲ್ಯೂ. ರಜಿಸ್ಟರ್

9) ಟಿ.ಇ.ಓ. ರಜಿಸ್ಟರ್

10) ವರ್ಕ್ಸ್ ರಜಿಸ್ಟರ್

11) ನಮೂನೆ–81

12) ಅಳತೆ ಪುಸ್ತಕಗಳ ಅರ್ಧವಾರ್ಷಿಕ ನಿಯತಕಾಲಿಕೆ

**ಉಗ್ರಾಣ ಶಾಖೆ:**

1) ದಾಸ್ತಾನು ಸ್ವೀಕೃತಿ ವಹಿ (ಪಿಡಬ್ಲ್ಯೂಎ–4)

2) ದಾಸ್ತಾನು ವಿತರಣಾ ವಹಿ (ಪಿಡಬ್ಲ್ಯೂಎ–4)

3) ದಾಸ್ತಾನು ಖರೀದಿ ಪುಸ್ತಕ

4) ಅರ್ಧ ವಾರ್ಷಿಕ ನಿಯತಕಾಲಿಕ ವಹಿ (ಪಿಡಬ್ಲ್ಯೂಎ–15)

5) ಖಾಲಿ ಸಾಮಗ್ರಿಗಳ (ಖಾಲಿ ಸಿಮೆಂಟ್ ಚೀಲ ಖಾಲಿ ಡಾಂಬರ್ ಬ್ಯಾರೆಲ್‌ಗಳ ವಹಿ (ಎಸ್ಎಂಜಿ–7)

6) ಖಾಲಿ ಅಳತೆ ಪುಸ್ತಕಗಳ ವಹಿ (ಪಿಡಬ್ಲ್ಯೂಜಿ–28)

7) ಲೇಖನ ಸಾಮಗ್ರಿಗಳ ಸ್ವೀಕೃತಿ ಮತ್ತು ವಿತರಣಾ ವಹಿ

8) ಕಛೇರಿ ಪೀಠೋಪಕರಣಗಳ ವಹಿ (ಕೆಎಫ್‌ಸಿ–34ಎ)

9) ಉಪಕರಣ ಮತ್ತು ಸ್ಥಿರಯಂತ್ರಗಳ ಸ್ವೀಕೃತಿ ವಹಿ (ಪಿಡಬ್ಲ್ಯೂಎ–4)

10) ಉಪಕರಣ ಮತ್ತು ಸ್ಥಿರಯಂತ್ರಗಳ ವಿತರಣಾ ವಹಿ (ಪಿಡಬ್ಲ್ಯೂಎ–4)

11) ಸೆಪ್ಟೆಂಬರ್ ಅಂತ್ಯದಉಪಕರಣ ಮತ್ತು ಸ್ಥಿರಯಂತ್ರಗಳ ವಾರ್ಷಿಕ ನಿಯತಕಾಲಿಕೆ (ಪಿಡಬ್ಲ್ಯೂಜಿ–17)

12) ಅಳತೆ ಪುಸ್ತಕಗಳ ಅರ್ಧವಾರ್ಷಿಕ ನಿಯತಕಾಲಿಕ (ಪಿಡಬ್ಲ್ಯೂಜಿ–17) ಬಿಡುಗಡೆಯಾದ ಸಾಮಗ್ರಿಗಳ ಲೆಕ್ಕದ ವಹಿ.

**ಕೈಪಿಡಿ–7**

ಇಲಾಖೆಯಲ್ಲಿ ನೀತಿ ನಿಯಮಗಳನ್ನು ಅಥವಾ ಆಡಳಿತವನ್ನು ನಡೆಸುವಲ್ಲಿ ಪಡೆಯುವ ಸಲಹಾ ಸೂತ್ರಗಳ ಅಥವಾ ಸಾರ್ವಜನಿಕ ಸದಸ್ಯರುಗಳಿಂದ ಸಲಹೆ ಪಡೆಯುವ ಬಗ್ಗೆ ಇರುವ ವ್ಯವಸ್ಥೆ ಮತ್ತು ವಿವರ.

------ ಏನೂ ಇರುವುದಿಲ್ಲ ------

**ಕೈಪಿಡಿ–8**

ಇಲಾಖೆಯಲ್ಲಿ ನಿಗಮ/ ಪರಿಷತ್ತು/ಸಮಿತಿ ಮತ್ತು ಇತರೆ ಸಂಸ್ಥೆಗಳ ವಿವರ ಮತ್ತು ಅದರ ಉದ್ದೇಶ ಮತ್ತು ಈ ಸಂಸ್ಥೆಗಳ ಸಭೆಗಳು ಮತ್ತು ಸಭೆಯ ನಡವಳಿಗಳು ಸಾರ್ವಜನಿಕರಿಗೆ ಲಭ್ಯವಿರುವ ಬಗ್ಗೆ.

----- ಏನೂ ಇರುವುದಿಲ್ಲ -----

**ಕೈಪಿಡಿ–9**

ಇಲಾಖೆಯ ಅಧಿಕಾರ ಮತ್ತು ಸಿಬ್ಬಂದಿ ವರ್ಗದ ನಿರ್ದೇಶಿಕೆ

ಈ ಇಲಾಖೆಯಲ್ಲಿ ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್ ಹಾಗೂ ಕಿರಿಯ ಇಂಜಿನೀಯರ್ ಇವರ ಅಧಿಕಾರದ ಬಗ್ಗೆ ಕೈಪಿಡಿ–2ರಲ್ಲಿ ಈಗಾಗಲೇ ತಿಳಿಸಲಾಗಿದೆ.

**ಸಿಬ್ಬಂದಿ ವರ್ಗದ ನಿರ್ದೇಶಿಕೆ (ಸಂಘಟನಾ ನಕ್ಷೆ) ಈ ಕೆಳಗೆ ನೀಡಿದೆ.**

| ಅ.ನಂ. | ಹುದ್ದೆ | ಹೆಸರು |
|---|---|---|
| 1 | ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್–1 | ಶ್ರೀ ಎಂ. ರೇವಣಸಿದ್ದಯ್ಯ |
| 2 | ಸಹಾಯಕ ಇಂಜಿನೀಯರ್–2 | 1) ಶ್ರೀ ಮಾಲತೇಶ ಪಿ.<br>2) ತೆರವಾಗಿದೆ. |
| 3 | ಕಿರಿಯ ಇಂಜಿನೀಯರ್–6 | 1) ಶ್ರೀ ವಿ.ಎಂ. ಭಟ್ಟ<br>2) ಶ್ರೀ ನಾಗರಾಜ ನಾಯ್ಕ<br>3) ಶ್ರೀ ಲಕ್ಷ್ಮಣ ಕಟ್ಟಿಮನಿ<br>4) ಶ್ರೀ ನಾಗೇಶ ಬಿ. ನಾಯ್ಕ<br>5) ತೆರವಾಗಿದೆ.<br>6) ತೆರವಾಗಿದೆ. |
| 4 | ಪ್ರಥಮ ದರ್ಜೆ ಸಹಾಯಕರು–1 | ತೆರವಾಗಿದೆ. |
| 5 | ದ್ವಿತೀಯ ದರ್ಜೆ ಸಹಾಯಕರು–2 | 1) ಶ್ರೀ ಆರ್. ಶ್ರೀನಿವಾಸ್<br>2) ಶ್ರೀಮತಿ ಸಾವಿತ್ರಿ ಜಿ. ಭಟ್ಟ |
| 6 | ಬೆರಳಚ್ಚುಗಾರರು–1 | ಶ್ರೀಮತಿ ಪಾರ್ವತಿ ಎನ್. ನಾಯ್ಕ |
| 7 | ಪರಿವೀಕ್ಷಕ ತಾಂತ್ರಿಕರು–1 | ಶ್ರೀ ಎಸ್. ಎ. ಕರಿಕಟ್ಟಿ |
| 8 | ಕೆಲಸ ನಿರೀಕ್ಷಕರು–4 | 1) ಶ್ರೀ ಅಶೋಕ ಪಿ. ನಾಯ್ಕ<br>2) ತೆರವಾಗಿದೆ.<br>3) ತೆರವಾಗಿದೆ.<br>4) ತೆರವಾಗಿದೆ. |

| ಅ.ನಂ. | ಹುದ್ದೆ | ಹೆಸರು |
|---|---|---|
| 9 | ಜವಾನರು–3 | 1) ಶ್ರೀ ಗಜಾನನ ಜಿ. ಮೆಸ್ತಾ<br>2) ಶ್ರೀಮತಿ ಕಮಲಾ ಎಸ್. ಹಾನಗಲ್<br>3) ತೆರವಾಗಿದೆ. |

**ಕೈಪಿಡಿ–10**

ಇಲಾಖೆಯ ಅಧಿಕಾರಿಗಳ ಮತ್ತು ಸಿಬ್ಬಂದಿ ವರ್ಗದವರ ತಿಂಗಳ ವೇತನ/ಪ್ರತಿಫಲ ಮತ್ತು ಅದನ್ನು ನೀಡುವ ಸೂತ್ರಗಳು ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್‌ರವರ ಕಛೇರಿಯಲ್ಲಿರುವ ಅಧಿಕಾರಿ ಮತ್ತು ಸಿಬ್ಬಂದಿಗಳ ವೇತನವನ್ನು ಕರ್ನಾಟಕ ಸರ್ಕಾರದ ಸಂಚಿತ ನಿಧಿಯಿಂದ ಪಾವತಿಸಲಾಗಿದೆ.

| ಅ.ನಂ. | ಹುದ್ದೆ | ಹೆಸರು | ವೇತನ ಶ್ರೇಣಿ | ಮೂಲ ವೇತನ |
|---|---|---|---|---|
| 1) | ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್–1 | ಶ್ರೀ ಶ್ರೀ ಎಂ. ರೇವಣಸಿದ್ದಯ್ಯ | 14050–25050 | 15600 |
| 2) | ಸಹಾಯಕ ಇಂಜಿನೀಯರ್–2 | 1) ಶ್ರೀ ಮಾಲತೇಶ ಪಿ. | 11400–21600 | 13350 |
| | | 2) -- ತೆರವು -- | 11400–21600 | |
| 3) | ಕಿರಿಯ ಇಂಜಿನೀಯರ್–6 | 1) --- ತೆರವು --- | 11400–21600 | |
| | | 2) --- ತೆರವು | 11400–21600 | |
| | | 3) ಶ್ರೀ ವಿ.ಎಂ. ಭಟ್ಟ | 11400–21600 | 16400 |
| | | 4) ಶ್ರೀ ನಾಗರಾಜ ನಾಯ್ಕ | 8825–16000 | 10250 |
| | | 5) ಶ್ರೀ ಲಕ್ಷ್ಮಣ ಕಟ್ಟಿಮನಿ | 8828–16000 | |
| | | 6) ಶ್ರೀ ನಾಗೇಶ ಬಿ. ನಾಯ್ಕ | 8825–16000 | 9750 |
| 4) | ಪ್ರಥಮ ದರ್ಜೆ ಸಹಾಯಕರು–1 | --- ತೆರವು --- | 7275–13350 | |
| 5) | ದ್ವಿತೀಯ ದರ್ಜೆ ಸಹಾಯಕರು–2 | 1) ಶ್ರೀ ಶ್ರೀನಿವಾಸ್ ಆರ್. | 5800–10500 | 10250 |
| | | 2)ಶ್ರೀಮತಿ ಸಾವಿತ್ರಿ ಜಿ. ಭಟ್ಟ | 5800–10500 | 12650 |
| 6) | ಬೆರಳಚ್ಚುಗಾರರು–1 | 1) ಶ್ರೀಮತಿ ಪಾರ್ವತಿ ಎನ್. ನಾಯ್ಕ | 5800–10500 | 8200 |
| 7) | ಪರಿವೀಕ್ಷಕ ತಾಂತ್ರಿಕರು–1 | 1) ಶ್ರೀ ಎಸ್.ಎ. ಕರಿಕಟ್ಟಿ | 6250–12000 | 13350 |
| 8) | ಜವಾನರು–3 | 1) --- ತೆರವು --- | 4800–7275 | |
| | | 2) ಶ್ರೀ ಗಜಾನನ ಜಿ.ಮೆಸ್ತಾ | 4800–7275 | 6950 |
| | | 3)ಶ್ರೀಮತಿ ಕಮಲಾ ಎಸ್. ಹಾನಗಲ್ | 4800–7275 | 5700 |

| ಅ.ನಂ. | ಹುದ್ದೆ | ಹೆಸರು | ವೇತನ ಶ್ರೇಣಿ | ಮೂಲ ವೇತನ |
|---|---|---|---|---|
| 9) | ಕೆಲಸ ನಿರೀಕ್ಷಕರು | 1) ಶ್ರೀ ಅಶೋಕ ಪಿ. ನಾಯ್ಕ | 5800–10500 | 10250 |
| | | 2) ತೆರವು | 5800–10500 | |
| | | 3) ತೆರವು | 5800–10500 | |
| | | 4) ತೆರವು | 5800–10500 | |

**ಕೈಪಿಡಿ–11**

| ಕ್ರ.ಸಂ. | ಲೆಕ್ಕಶೀರ್ಷಿಕೆ | 2010–11 | | 2011–12 | |
|---|---|---|---|---|---|
| | | ಅನುದಾನ | ವೆಚ್ಚ | ಅನುದಾನ | ವೆಚ್ಚ |
| 1 | 2 | 3 | 4 | 5 | 6 |
| 1 | 4215–01–102–9–01 ಗ್ರಾ.ನೀ.ಸ.ರಾಜ್ಯ ವಲಯ | 29.83 | 29.83 | – | – |
| 2 | 4215–01–102–9–04ಗ್ರಾ.ನೀ.ಸ.ಕೇಂದ್ರ ವಲಯ, ದುರಸ್ಥಿ. | 111.00 | 110.89 | – | – |
| 3 | Tarafill Filters | 39.60 | – | – | – |
| 4 | Targeted School | 23.00 | 4.86 | – | 13.60 |
| 5 | 4215–01–102–9–04 ಅಂತ:ರ್ಜಲ ಅಭಿವೃದ್ಧಿ ಯೋಜನೆ ಹೆಚ್ಚುವರಿ ಕಾಮಗಾರಿ | 88.00 | | – | 81.03 |
| 6 | 4215–01–102–9–01 ಅಂತ:ರ್ಜಲ ಅಭಿವೃದ್ಧಿ ಯೋಜನೆ | 69.88 | 13.22 | – | |
| 7 | ಟಾಸ್ಕ್ ಫೋರ್ಸ್ ಯೋಜನೆ ಕುಡಿಯುವ ನೀರಿನ ಕಾಮಗಾರಿಗಳು | 3.20 | 2.40 | 11.50 | 3.01 |
| 8 | ಮುಖ್ಯಮಂತ್ರಿ ಗ್ರಾಮೀಣ ರಸ್ತೆ ಅಭಿವೃದ್ಧಿ ಯೋಜನೆ ಹೆಚ್ಚುವರಿ ಅನುದಾನ | 80.00 | 76.00 | – | – |
| 9 | ಮುಖ್ಯಮಂತ್ರಿ ಗ್ರಾಮೀಣ ರಸ್ತೆ ಅಭಿವೃದ್ಧಿ ಯೋಜನೆ ನಿರ್ವಹಣೆ (ಲಮ್ ಸಮ್) | 50.00 | 49.52 | 50.00 | 40.49 |
| 10 | 5054–04–337–01ಗ್ರಾಮೀಣ ಸಂಪರ್ಕ ರಸ್ತೆ ಮತ್ತು ಸೇತುವೆ | 21.25 | 20.27 | – | – |
| 11 | 5054 ಗ್ರಾಮೀಣ ಸಂಪರ್ಕ ರಸ್ತೆ ವಿಧಾನ ಸಭಾ ಕ್ಷೇತ್ರವಾರು | 55.00 | 52.54 | – | – |
| 12 | ನಬಾರ್ಡ್ RIDF–15 | 44.00 | 40.70 | – | – |
| 13 | ನಬಾರ್ಡ್ RIDF–16 Flood Effected Area | 35.00 | 3.74 | – | 17.64 |
| 14 | ಪರಿಶಿಷ್ಠ ಜಾತಿ ಮತ್ತು ಪರಿಶಿಷ್ಠ ವರ್ಗಗಳ ಕಾಲನಿಗಳಿಗೆ ಮೂಲಭೂತ ಸೌಕರ್ಯ | 13.36 | 4.01 | 50.00 | – |

| ಕ್ರ.ಸಂ. | ಲೆಕ್ಕಶೀರ್ಷಿಕೆ | 2010–11 | | 2011–12 | |
|---|---|---|---|---|---|
| | | ಅನುದಾನ | ವೆಚ್ಚ | ಅನುದಾನ | ವೆಚ್ಚ |
| 1 | 2 | 3 | 4 | 5 | 6 |
| 15 | ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆ | 10.00 | 0.05 | – | 8.99 |
| 16 | ಕೃಷಿ ಇಲಾಖೆ ಅನುದಾನ | 1.50 | 1.50 | 1.00 | 1.00 |
| 17 | ತೋಟಗಾರಿಕೆ ಇಲಾಖೆ ಅನುದಾನ | 37.90 | 13.39 | – | 17.32 |
| 18 | ತೋಟಗಾರಿಕೆ ಇಲಾಖೆ ಅನುದಾನ(ಜಿಲ್ಲಾ ವಲಯ) | 7.50 | 7.17 | 8.00 | 7.92 |
| 19 | ಪಶು ಸಂಗೋಪನಾ ಇಲಾಖೆ | 7.05 | 6.73 | 5.05 | 4.97 |
| 20 | ಆರೋಗ್ಯ ಇಲಾಖೆ | 7.50 | 0.75 | 1.75 | 1.74 |
| 21 | 2225 ಹಿಂದುಳಿದ ವರ್ಗಗಳ ಮತ್ತು ಅಲ್ಪ ಸಂಖ್ಯಾತರ ಇಲಾಖೆಯ ಅನುದಾನ | – | – | 1.50 | 1.49 |
| 22 | ಶಿಕ್ಷಣ ಇಲಾಖೆ ಅನುದಾನ | 45.00 | 43.08 | 70.00 | 69.52 |
| 23 | ಶಿಕ್ಷಣ ಇಲಾಖೆ ಅನುದಾನ (ಶಾಲಾ ಕೊಠಡಿ ನಿರ್ಮಾಣ | 42.58 | 41.07 | – | – |
| 24 | ಶಿಕ್ಷಣ ಇಲಾಖೆ ಅನುದಾನ ಪರಿವೀಕ್ಷಣೆ ಪ್ರಾಥಮಿಕ | 2.40 | 2.02 | – | – |
| 25 | ಶಿಕ್ಷಣ ಇಲಾಖೆ ಅನುದಾನ ಸೇರ್ಪಡೆ ಮತ್ತು ಮಾರ್ಪಾಡು | 4.50 | 2.00 | 2.00 | |
| 26 | ನಬಾರ್ಡ್ RIDF-15 ಮಲೆನಾಡು ಏರಿಯಾ | 11.00 | – | – | 8.23 |
| 27 | ನಬಾರ್ಡ್ RIDF-16 ಕಾಲುಸಂಕಗಳ ನಿರ್ಮಾಣ | 118.01 | – | – | 12.42 |
| 28 | 12ನೇ ಹಣಕಾಸು ಆಯೋಗ ಕಟ್ಟಡಗಳು ಸಾಮಾನ್ಯ | 8.57 | 5.27 | – | – |
| 29 | 13ನೇ ಹಣಕಾಸು ಆಯೋಗ ಕಟ್ಟಡಗಳು ಸಾಮಾನ್ಯ | 10.12 | 5.08 | 10.12 | 8.28 |
| 30 | ಸುವರ್ಣಗ್ರಾಮ ಯೋಜನೆ | 180.93 | 51.49 | – | 99.78 |
| 31 | ಜಿಲ್ಲಾ ಪಂಚಾಯತ್ ಅಭಿವೃದ್ಧಿ ಅನುದಾನ ತೆರೆದ ಬಾವಿಗಳ ಆಳ ಹೆಚ್ಚಿಸುವದು. | 1.00 | 0.99 | – | – |
| 32 | 2702 ಕೆರೆಗಳ ನಿರ್ಮಾಣ | 0.44 | 0.41 | – | – |
| 33 | 2702ಚಿಕ್ಕ ನೀರಾವರಿ ಕೆರೆಗಳ ನಿರ್ವಹಣೆ | 6.50 | 5.93 | 4.56 | 4.46 |
| 34 | ಪ್ರಕೃತಿ ವಿಕೋಪ ಯೋಜನೆ | 40.50 | 26.14 | 68.00 | 9.25 |
| 35 | ಮಾನ್ಯ ಲೋಕಸಭಾ ಸದಸ್ಯರ ಅನುದಾನ | 15.00 | 3.89 | – | – |
| 36 | ಶಾಸಕರ ಸ್ಥಳೀಯ ಪ್ರಧೇಶಾಭಿವೃದ್ಧಿ ಯೋಜನೆ (ಮಾನ್ಯ ಶ್ರೀ ಕಾಗೇರಿ) | 25.73 | 22.35 | 10.27 | 4.13 |

| ಕ್ರ.ಸಂ. | ಲೆಕ್ಕಶೀರ್ಷಿಕೆ | 2010–11 | | 2011–12 | |
|---|---|---|---|---|---|
| | | ಅನುದಾನ | ವೆಚ್ಚ | ಅನುದಾನ | ವೆಚ್ಚ |
| 1 | 2 | 3 | 4 | 5 | 6 |
| 37 | ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆ (ಶ್ರೀ ವಿ.ಎಸ್. ಪಾಟೀಲ್ ) | 4.41 | 4.19 | – | – |
| 38 | ಎಂ.ಎ.ಡಿ.ಬಿ ಸಾಮಾನ್ಯ | 5.50 | 2.99 | – | – |
| 39 | ಎಂ.ಎ.ಡಿ.ಬಿ.ಅಧ್ಯಕ್ಷರ ವಿವೇಚನಾ ನಿಧಿ | 5.00 | – | – | – |
| 40 | ಸ್ವರ್ಣ ಜಯಂತಿ ಗ್ರಾಮ ಸ್ವರಾಜ್ ರೋಜಗಾರ್ ಯೋಜನೆ | – | – | 14.50 | 4.02 |
| 41 | ಡಾಂಬರ ರಸ್ತೆಗಳಿಗೆ ತಗ್ಗು ತುಂಬುವದು | – | – | 10.39 | 10.23 |
| 42 | 13ನೇ ಹಣಕಾಸು ಯೋಜನೇತರ | – | – | 99.34 | 92.03 |
| 43 | ಜಿಲ್ಲಾ ಪಂಚಾಯತ್ ಅಧ್ಯಕ್ಷರ ಅನಿರ್ಭಂದಿತ ಅನುದಾನ | – | – | 9.50 | 9.49 |
| 44 | ಕೆರೆಗಳ ಪುನ:ರುಜ್ಜೀವನ | – | – | 11.50 | 9.54 |

**ಕೈಪಿಡಿ–12**

ಇಲಾಖೆಯಲ್ಲಿ ಸಾರ್ವಜನಿಕರಿಗೆ ಮಾಹಿತಿ ನೀಡಲು ಲಭ್ಯವಿರುವ ಸವಲತ್ತುಗಳು ಹಾಗೂ ಗ್ರಂಥಾಲಯ ವಾಚನಾಲಯಗಳ ವಿವರ.

ಈ ಕಾರ್ಯಾಲಯದಲ್ಲಿ ಯಾವುದೇ ಗ್ರಂಥಾಲಯ , ವಾಚನಾಲಯಗಳು ಸಾರ್ವಜನಿಕರಿಗೆ ಲಭ್ಯವಿರುವುದಿಲ್ಲ. ಸಾರ್ವಜನಿಕರಿಗೆ ಅವಶ್ಯವಿರುವ ಮಾಹಿತಿಯನ್ನು ಕಾರ್ಯಾಲಯದ ಕೆಲಸದ ವೇಳೆಯಲ್ಲಿ ಪ್ರಥಮ ದರ್ಜೆ ಸಹಾಯಕರನ್ನು ಅಥವಾ ಸ್ವಂತ ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್‌ರನ್ನು ಭೇಟಿಯಾಗಿ ಅಥವಾ ಅರ್ಜಿ ನೀಡಿ ಪಡೆಯಬಹುದಾಗಿದೆ. ಸಾರ್ವಜನಿಕ ವಿಚಾರಣೆಗಾಗಿ ಸಂಪರ್ಕಿಸ ಬೇಕಾದ ಈ ಕಾರ್ಯಾಲಯದ ದೂರವಾಣಿ ಸಂಖ್ಯೆ: 08384–226143 .

**ಕೈಪಿಡಿ–13**

ಈ ಉಪ ವಿಭಾಗದಲ್ಲಿನ ಸಾರ್ವಜನಿಕ ಮಾಹಿತಿ ಅಧಿಕಾರಿಗಳ ಹಾಗೂ ಮೇಲ್ಮನವಿ ಪ್ರಾಧಿಕಾರದ ಹೆಸರು, ಪದನಾಮ, ವಿಳಾಸ ದೂರವಾಣಿ ಸಂಖ್ಯೆ ಇತ್ಯಾದಿ ವಿವರಗಳು.

| ಅ. ನಂ. | ಕಛೇರಿ ಮತ್ತು ಪೂರ್ಣ ವಿಳಾಸ | ಸಾರ್ವಜನಿಕ ಮಾಹಿತಿ ಅಧಿಕಾರಿ ಸೆಕ್ಷನ್–5 (1) | ಸಾರ್ವಜನಿಕರು ಮಾಹಿತಿ ನೀಡುವ ಅಧಿಕಾರಿ ಸೆಕ್ಷನ್ –5 (2) | ಮೇಲ್ಮನವಿ ಪ್ರಾಧಿಕಾರ ಸೆಕ್ಷನ್– 19(1) |
|---|---|---|---|---|
| 1 | ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರರವರ ಕಛೇರಿ, ಪಂಚಾಯತ್‌ರಾಜ್ ಇಂಜಿನೀಯರಿಂಗ್ ಉಪ ವಿಭಾಗ, ಶಿರಸಿ.(ಉ.ಕ.) | ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರು, ಪಂಚಾಯತ್‌ರಾಜ್ ಇಂಜಿನೀಯರಿಂಗ್ ಉಪ ವಿಭಾಗ, ಶಿರಸಿ.(ಉ.ಕ.) | ಪ್ರ.ದ.ಸ./ದ್ವಿ.ದ.ಸ. ಪಂಚಾಯತ್ ರಾಜ್ ಇಂಜಿನೀಯರಿಂಗ್ ಉಪ ವಿಭಾಗ, ಶಿರಸಿ | ಅಧ್ಯಕ್ಷರು, ತಾಲೂಕಾ ಪಂಚಾಯತ್, ಶಿರಸಿ. |

**ಶ್ರೀ ಎಂ. ರೇವಣಸಿದ್ದಯ್ಯ**

ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರು,
ಪಂಚಾಯತ್ ರಾಜ್ ಇಂಜಿನೀಯರಿಂಗ್ ಉಪ ವಿಭಾಗ, ಶಿರಸಿ.

**ಪಿ.ಆರ್. 884**

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ

**ಬಿ3:ಅಮೊ:ವಾಹನ:ವಿವ:15/10–11 ದಿನಾಂಕ:16–06–2012**

| | | |
|---|---|---|
| **ಉಪಸ್ಥಿತರು** | :: | ಆರ್.ರವಿಶಂಕರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ. |
| **ಪಿರ್ಯಾಧಿದಾರರು** | :: | ವಲಯ ಅರಣ್ಯಾಧಿಕಾರಿ,,ಅಂಬ್ಲಿಗೊಳ ವಲಯ, ಅಂಬ್ಲಿಗೊಳ (ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ) |
| **ಬಾಧ್ಯತೆದಾರರು** | :: | ಯಾರು ಹಕ್ಕು ಬಾಧ್ಯತೆ ಅರ್ಜಿ ಸಲ್ಲಿಸಿಲ್ಲ. |

**ಪ್ರಸ್ತಾವನೆ:–**

ದಿ:16–08–2010ರಂದು ಒಂದು ವಾಹನ ಟಿ.ವಿ.ಎಸ್. ಮ್ಯಾಕ್ಸ್–100 ಬೈಕ್ ಕೆಎ–15 ಹೆಚ್–8961 ರಲ್ಲಿ ಅಕ್ರಮವಾಗಿ ಅರಣ್ಯ ಉತ್ಪನ್ನ ಸಾಗಿಸುತ್ತಿರುವಾಗ, ಸಾಲೂರು ಶಾಖೆಯ ವನಪಾಲಕ ಪತ್ತೆಹಚ್ಚಿ ಬರೆದ ಮಹಜರ್ ಈ ಕೆಳಗಿನಂತಿದೆ.

ದಿ:16–08–2010 ರಂದು ಅಂಬ್ಲಿಗೊಳ ವಲಯದ ಸಾಲೂರು ಶಾಖೆ ವನಪಾಲಕ ಮತ್ತು ಸಿಬ್ಬಂದಿಯವರು ಸಾಗರ ತಾ. ಆನಂದಪುರಂ ಹೋಬಳಿ ನಾಡುವಳ್ಳಿ ಗ್ರಾಮದ ಸ.ನಂ. 46 ರಲ್ಲಿರುವ ಬೆಳಂದೂರು ಮನ್ನಾಜಂಗ್ಲಿಯಲ್ಲಿ ಗಸ್ತು ತಿರುಗುತ್ತಿರುವಾಗ ಒಂದು ಬೈಕ್ ಟಿ.ವಿ.ಎಸ್. ಮ್ಯಾಕ್ಸ್–100 ನಂ:ಕೆಎ–15–ಹೆಚ್–8961 ರಲ್ಲಿ ಬೀಟೆ ತುಂಡು ಅಕ್ರಮವಾಗಿ ಸಾಗಿಸುತ್ತಿರುವುದು ಕಂಡುಬಂದಿತು. ಸದರಿ ವಾಹನವನ್ನು ನಿಲ್ಲಿಸಲು ಸೂಚಿಸಿದಾಗ ವಾಹನ ನಿಲ್ಲಿಸಿದರು. ಅದರಲ್ಲಿ ಎರಡು ಜನ ಆಸಾಮಿಗಳಿದ್ದು, ಅವರ ಹೆಸರು, ವಿಳಾಸ ವಿಚಾರಿಸಲಾಗಿ ಮೊದಲನೇಯವನು ಶಫೀ ಬಿನ್ ಬಾಬು ಸಾಬ್, 22 ವರ್ಷ, ಗಗರಿಕೆರೆ ಶಿಕಾರಿಪುರ ತಾಲ್ಲೂಕ್ ಎಂದು, ಎರಡನೇಯವನು ಮಾರುತಿ ಬಿನ್ ಬಸವರಾಜಪ್ಪ, 22 ವರ್ಷ, ಗಬ್ಬೂರು ಶಿಕಾರಿಪುರ ತಾಲ್ಲೂಕ್ ಎಂದು ಮತ್ತು ಈ ಬೀಟೆ ತುಂಡುಗಳನ್ನು ಒಣಗಿದ ಮರದಿಂದ ಕಡಿದು ಮನೆ ಬಳಕೆಗಾಗಿ ತೆಗೆದುಕೊಂಡು ಹೋಗಿದೆಂದು ಈ ಬೀಟೆ ತುಂಡುಗಳನ್ನು ಸಾಗಿಸಲು ರಹದಾರಿ ಇಲ್ಲವೆಂದು ತಿಳಿಸಿದರು. ಅದ್ದರಿಂದ ಇದು ಅಕ್ರಮ ಸಾಗಾಣಿಕೆ ವೆಂದು ಪರಿಗಣಿಸಿ ಆಸಾಮಿ, ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತು ವರದಿಯೊಂದಿಗೆ ಇಲಾಖಾ ಪರ ಜಪ್ತುಪಡಿಸಿಕೊಂಡು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 24, 71(ಎ), 104(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969 ಉಪನಿಯಮ 144, 165ರ ಪ್ರಕಾರ ವನಪಾಲಕರು ಅರಣ್ಯ ಮೊಕದ್ದಮೆ ಸಂಖ್ಯೆ:44/10–11ನ್ನು ದಾಖಲಿಸಿರುತ್ತಾರೆ. ನಂತರ ವಾಹನವನ್ನು ವಲಯ ಅರಣ್ಯಾಧಿಕಾರಿ, ಅಂಬ್ಲಿಗೊಳ ವಲಯ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ.

ನಂತರ ವಲಯ ಅರಣ್ಯಾಧಿಕಾರಿ, ಅಂಬ್ಲಿಗೊಳ ವಲಯ, ಅಂಬ್ಲಿಗೊಳ ಇವರು ಎರಡು ಜನ ಆಸಾಮಿಗಳನ್ನು ಜೆ.ಎಂ.ಎಫ್.ಸಿ. ನ್ಯಾಯಾಲಯಕ್ಕೆ ಒಪ್ಪಿಸಿ, ಸದರಿ ವಾಹನ ಮತ್ತು ಎಲ್ಲಾ ದಾಖಲೆಗಳನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ಈ ನ್ಯಾಯಾಲಯದಿಂದ ಆದೇಶವಾಗಿದೆ.

ಈ ವಾಹನದ 'ಬಿ' ಎಕ್ಸ್‌ಟ್ರ್ಯಾಕ್ಟನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಈ ನ್ಯಾಯಾಲಯದಿಂದ ಬಿ3–ಅಮೊ–ವಾಹನ–ವಿವ–15/10–11, ದಿ:18–08–2010 ರಂದು ಸಾರಿಗೆ ಅಧಿಕಾರಿ, ಸಾಗರ ಇವರಿಗೆ ಪತ್ರ ಬರೆದು ಕೋರಲಾಯಿತು. ಈ ವಾಹನದ 'ಬಿ' ಎಕ್ಸ್‌ಟ್ರ್ಯಾಕ್ಟನ್ನು ದಿ:24–03–2011 ರಂದು ಸಾರಿಗೆ ಅಧಿಕಾರಿ, ಸಾಗರ ಇವರು ಈ ನ್ಯಾಯಾಲಯಕ್ಕೆ ಒದಗಿಸಿರುತ್ತಾರೆ. ಈ 'ಬಿ' ಎಕ್ಸ್‌ಟ್ರ್ಯಾಕ್ಟನಲ್ಲಿ ಆರ್.ಸಿ. ಮಾಲೀಕರ ಹೆಸರು ವಿಳಾಸ ಈ ರೀತಿ ಇರುತ್ತದೆ. ಶ್ರೀ ಎಂ.ಎನ್.ಪ್ರಕಾಶ್ ಬಿನ್ ಮಹಾದೇವಯ್ಯ, ಮನೆ ನಂ. 3, L.I.G. K.H.B. ಕಾಲೋನಿ ಗಾಂಧಿನಗರ, ಸಾಗರ ಎಂದಿರುತ್ತದೆ. ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಬಿ)(I)ರ ಪ್ರಕಾರ ಆರ್.ಸಿ. ಮಾಲೀಕರಿಗೆ ಈ ನ್ಯಾಯಾಲಯದಿಂದ ನೋಟಿಸ್‌ನ್ನು ದಿ:30–09–2011 ರಂದು ನೊಂದಣಿ ಅಂಚೆ ಮೂಲಕ ಜಾರಿ ಮಾಡಿದೆ.

ಈ ನಡುವೆ ಈ ವಾಹನದ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ ಬಿ3–ಅಮೊ–ವಾಹನ–ವಿವ–24/10–11 ದಿ:11–10–2010ರಂದು ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಬೆಂಗಳೂರು ಮತ್ತು ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ಗೆಜೆಟ್ ಮತ್ತು ದಿನಪ್ರತಿಕೆಯಲ್ಲಿ ಪ್ರಕಟಿಸಲು ಕೋರಲಾಯಿತು. ಅದರಂತೆ, ದಿ:24–10–2010ರಂದು ಸಾಗರ ವಾರ್ತೆ ದಿನಪತ್ರಿಕೆಯಲ್ಲಿ ಮತ್ತು ದಿ:04–11–2010ರಂದು ರಾಜ್ಯ ಗೆಜೆಟ್ ಪತ್ರಿಕೆಯಲ್ಲಿ ಈ ಪ್ರಕಟಣೆಯು ಪ್ರಕಟಗೊಂಡಿರುತ್ತದೆ. ಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ವಾಹನ ಮಾಲೀಕರಿರಾಗಲೀ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಕ್ಲೇಮು ಅರ್ಜಿಯನ್ನು ಸಲ್ಲಿಸಿರುವುದಿಲ್ಲ. ಇದರಿಂದ ಈ ವಾಹನ ಬಿಡಿಸಿಕೊಳ್ಳಲು ವಾಹನ ಮಾಲೀಕರಿಗೆ ಆಸಕ್ತಿ ಇಲ್ಲವೆಂದು ತೀರ್ಮಾನಿಸಲಾಯಿತು. ಹಾಗೇ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

ಸಹಾಯಕ ಸರ್ಕಾರಿ ಅಭಿಯೋಜಕರು ದಿ:19–05–2012ರಂದು ವಾದ ಮಂಡಿಸಿ, ಸದರಿ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಸಾಗಿಸುತ್ತಿರುವಾಗ ಮಾಲು ಸಹಿತ ವಲಯ ಅರಣ್ಯಾಧಿಕಾರಿ ಅಂಬ್ಲಿಗೊಳ ವಲಯ ಮತ್ತು ಸಿಬ್ಬಂದಿಯವರು ಪತ್ತೆಹಚ್ಚಿ ಕ್ರಿಮಿನಲ್ ಕೇಸ್ ದಾಖಲಿಸಿರುತ್ತಾರೆ. ಕೇಸ್ ದಾಖಲಿಸಿದ ಬಗ್ಗೆ ಪ್ರಥಮ ವರ್ತಮಾನ ವರದಿ, ಜಪ್ತಿ ವರದಿಯನ್ನು ವಲಯ ಅರಣ್ಯಾಧಿಕಾರಿ ಅಂಬ್ಲಿಗೊಳ ವಲಯ ಇವರು ಈ ನ್ಯಾಯಾಲಯಕ್ಕೆ

ಸಲ್ಲಿಸಿರುತ್ತಾರೆ. ಇದರಿಂದ ಈ ವಾಹನದಲ್ಲಿ ಬೀಟೆ ನಾಟಾಗಳನ್ನು ಅಕ್ರಮವಾಗಿ ಸಾಗಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿದೆ. ಹಾಗೂ ಈ ವಾಹನದ ಬಗ್ಗೆ ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಮತ್ತು ದಿನಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದ್ದರಿಂದ ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಆರ್.ರವಿಶಂಕರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಅರಣ್ಯ ಮೊಕದ್ದಮೆಯಲ್ಲಿ ಜಪ್ತು ಮಾಡಿದ ವಾಹನ ಟಿ.ವಿ.ಎಸ್. ಮ್ಯಾಕ್ಸ್–100 ನಂಬರ್: ಕೆಎ–15–ಹೆಚ್–8961 (ಛಾಸ್ಸಿಸ್ ನಂ: 9211F417551, ಇಂಜಿನ್ ನಂ: C–9211M473485) ಮತ್ತು 07 ತುಂಡು ಬೀಟೆ 0.068 ಎಂ3ನ್ನು ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದ್ದೇನೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ:16–06–2012 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30(ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

**ಆರ್.ರವಿಶಂಕರ್**
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ

**ಪಿ.ಆರ್. 886**

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**

**ಬಿ3:ಅಮೊ:ವಾಹನ:ವಿವ:16/10–11 ದಿನಾಂಕ: 16–06–2012**

| | | |
|---|---|---|
| **ಉಪಸ್ಥಿತರು** | :: | ಆರ್.ರವಿಶಂಕರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ. |
| **ಪಿರ್ಯಾಧಿದಾರರು** | :: | ವಲಯ ಅರಣ್ಯಾಧಿಕಾರಿ, ಶಿರಾಳಕೊಪ್ಪ ವಲಯ, ಶಿರಾಳಕೊಪ್ಪ (ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ) |
| **ಬಾಧ್ಯತೆದಾರರು** | :: | ಯಾರು ಕ್ಲೇಮು ಅರ್ಜಿ ಸಲ್ಲಿಸಿರುವುದಿಲ್ಲ. |

**ಪ್ರಸ್ತಾವನೆ:–**

ದಿ:23–02–2010ರಂದು ಒಂದು ವಾಹನ ಮಾರುತಿ ವ್ಯಾನ್‌ನಲ್ಲಿ ಬೀಟೆ ನಾಟಾ ಅಕ್ರಮವಾಗಿ ಸಾಗಿಸುತ್ತಿರುವುದನ್ನು ಶಿರಾಳಕೊಪ್ಪ ವಲಯದ ಕಸಬಾ ಶಾಖೆಯ ವನಪಾಲಕ ಪತ್ತೆಹಚ್ಚಿ ಬರೆದ ಮಹಜರ್ ಈ ಕೆಳಗಿನಂತಿದೆ.

ದಿ:23–02–2010ರಂದು ಕಸಬಾ ಶಾಖೆಯ ವನಪಾಲಕ ಮತ್ತು ಸಿಬ್ಬಂದಿಯವರು ಸೊರಬ ತಾ. ಕಸಬಾ ಹೋಬಳಿ ಕೊಲ್ಗೆಣಿಸಿನಿಂದ ಛತ್ರದಳ್ಳಿಗೆ ಹೋಗುವ PWD ರಸ್ತೆಯ ಮಾವಿನ ಕೊಪ್ಪಲು ಬಳಿ ಗಸ್ತು ತಿರುಗುತ್ತಿರುವಾಗ ಒಂದು ಮಾರುತಿ ವ್ಯಾನ್‌ನ್ನು 02 ಜನ ಆಸಾಮಿಗಳು ರಿಪೇರಿ ಮಾಡುತ್ತಿದ್ದರು. ಇಲಾಖಾ ವಾಹನ ಮತ್ತು ಸಿಬ್ಬಂದಿಯವರನ್ನು ಕಂಡು ವಾಹನ ಬಿಟ್ಟು, ಆಸಾಮಿಗಳು ಕೈಗೇ ಸಿಗದೇ ಪರಾರಿಯಾದರು. ಓಡಿ ಹೋದ ಆಸಾಮಿಗಳು ಸಿಬ್ಬಂದಿಗಳಿಗೆ ಪರಿಚಯವಿದೆ. ಒಂದನೇಯವನ ಹೆಸರು ಈಸೂಬ್ ಸಾಬ್ ಬಿನ್ ರಶೀದ್ ಸಾಬ್, ಸಣ್ಣಬ್ಯಾಣದಕೇರಿ, 45 ವರ್ಷ ಶಿರಾಳಕೊಪ್ಪ, ಎರಡನೇಯವನು ಸಾಜಿದ ಬಿನ್ ಸೆರಾಲಿ, 30 ವರ್ಷ ಎಂದು ಗುರುತಿಸಿದರು. ಮಾರುತಿ ವ್ಯಾನ್ ಬಿಳಿಯ ಬಣ್ಣದಾಗಿದ್ದು, ನಂಬರ್ ಕಂಡುಬಂದಿರುವುದಿಲ್ಲ. ವಾಹನದೊಳಗಡೆ ಪರಿಶೀಲಿಸಿದಾಗ ಎದುರುಗಡೆ ಎರಡು ಸೀಟುಗಳಿದ್ದವು, ಆದರೆ ಹಿಂಬದಿಯ ಸೀಟ್‌ಗಳು ಇರಲಿಲ್ಲ. ಹಿಂಭಾಗದಲ್ಲಿ 02 ಹಸಿಯಾದ ಬೀಟೆ ನಾಟಾಗಳಿದ್ದವು, ಸದರಿ ನಾಟಾಗಳನ್ನು ಗರಗಸದಿಂದ ಕೊಯ್ತು ಮಾಡಿದಾಗಿರುತ್ತದೆ. ಈ ನಾಟಾಗಳ ಮೇಲೆ ಇಲಾಖಾ ಛಾಪಾ ಗುರುತುಗಳು ಕಂಡುಬಂದಿರುವುದಿಲ್ಲ. ಈ ನಾಟಾಗಳ ಅಳತೆ ಮಾಡಲಾಗಿ 02=0.363 ಎಂ3 ಪ್ರಮಾಣವಿದ್ದು, ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತು ವರದಿಯೊಂದಿಗೆ ಇಲಾಖಾ ಪರ ಜಪ್ತುಪಡಿಸಿಕೊಂಡು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 24, 62, 71(ಎ), 104(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969 ಉಪನಿಯಮ 144, 165ರ ಪ್ರಕಾರ ವನಪಾಲಕರು ಅರಣ್ಯ ಮೊಕದ್ದಮೆ ಸಂಖ್ಯೆ:29/10–11ನ್ನು ದಾಖಲಿಸಿರುತ್ತಾರೆ. ನಂತರ ವಾಹನವನ್ನು ವಲಯ ಅರಣ್ಯಾಧಿಕಾರಿ, ಶಿರಾಳಕೊಪ್ಪ ವಲಯ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ.

ನಂತರ ವಲಯ ಅರಣ್ಯಾಧಿಕಾರಿ, ಶಿರಾಳಕೊಪ್ಪ ವಲಯ, ಶಿರಾಳಕೊಪ್ಪ ಇವರು ಈ ವಾಹನ ಮತ್ತು ಎಲ್ಲಾ ದಾಖಲೆಗಳನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ಈ ನ್ಯಾಯಾಲಯದಿಂದ ಆದೇಶವಾಗಿದೆ.

ಈ ನಡುವೆ ಈ ವಾಹನದ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ ಬಿ3–ಅಮೊ–ವಾಹನ–ವಿವ–24/10–11 ದಿ:11–10–2010 ರಂದು ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಬೆಂಗಳೂರು ಮತ್ತು ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ಗೆಜೆಟ್ ಮತ್ತು ದಿನಪ್ರತಿಕೆಯಲ್ಲಿ ಪ್ರಕಟಿಸಲು ಕೋರಲಾಯಿತು. ಅದರಂತೆ, ದಿ:24–10–2010ರ ಸಾಗರ ವಾರ್ತೆ ದಿನಪತ್ರಿಕೆಯಲ್ಲಿ ಮತ್ತು ದಿ:04–11–2010 ರಂದು ರಾಜ್ಯ ಗೆಜೆಟ್ ಪತ್ರಿಕೆಯಲ್ಲಿ ಈ ಪ್ರಕಟಣೆಯು ಪ್ರಕಟಗೊಂಡಿರುತ್ತದೆ. ಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ವಾಹನ ಮಾಲೀಕರಿರಾಗಲೀ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಕ್ಲೇಮು ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

ಸಹಾಯಕ ಸರ್ಕಾರಿ ಅಭಿಯೋಜಕರು ದಿ:19–05–2012ರಂದು ವಾದ ಮಂಡಿಸಿ, ಸದರಿ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಸಾಗಿಸುತ್ತಿರುವಾಗ ಮಾಲು ಸಹಿತ ಶಿರಾಳಕೊಪ್ಪ ವಲಯದ ವಲಯ ಅರಣ್ಯಾಧಿಕಾರಿ ಮತ್ತು ಸಿಬ್ಬಂದಿಯವರು ಪತ್ತೆಹಚ್ಚಿ ಕ್ರಿಮಿನಲ್ ಕೇಸ್ ದಾಖಲಿಸಿರುತ್ತಾರೆ. ಕೇಸ್ ದಾಖಲಿಸಿದ ಬಗ್ಗೆ ಪ್ರಥಮ ವರ್ತಮಾನ ವರದಿ, ಜಪ್ತಿ ವರದಿಯನ್ನು ವಲಯ ಅರಣ್ಯಾಧಿಕಾರಿ ಶಿರಾಳಕೊಪ್ಪ ವಲಯ ಇವರು ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಇದರಿಂದ ಈ ವಾಹನದಲ್ಲಿ ಬೀಟೆ ನಾಟಾಗಳನ್ನು ಅಕ್ರಮವಾಗಿ ಸಾಗಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿದೆ. ಹಾಗೂ ಈ ವಾಹನದ ಪ್ರಚಾರಕ್ಕಾಗಿ ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಮತ್ತು ದಿನಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದ್ದರಿಂದ ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಆರ್.ರವಿಶಂಕರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಅರಣ್ಯ ಮೊಕದ್ದಮೆಯಲ್ಲಿ ಜಪ್ತು ಮಾಡಿದ ವಾಹನ ಮಾರುತಿ ವ್ಯಾನ್ ನಂಬರ್ ಇಲ್ಲ (ಛಾಸ್ಸಿಸ್ ನಂ: IN–872931 & ಇಂಜಿನ್ ನಂ: ಕಂಡುಬಂದಿಲ್ಲ) ಮತ್ತು ಬೀಟೆ ನಾಟ 02=0.363 ಎಂ3ನ್ನು ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದ್ದೇನೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ: 16–06–2012 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

**ಆರ್.ರವಿಶಂಕರ್**

**ಪಿ.ಆರ್. 887**

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ

**ಬಿ3:ಅಮೊ:ವಾಹನ:ವಿವ:20/10–11 ದಿನಾಂಕ: 16–06–2012**

**ಉಪಸ್ಥಿತರು** :: ಆರ್.ರವಿಶಂಕರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಪಿರ್ಯಾಧಿದಾರರು** :: ವಲಯ ಅರಣ್ಯಾಧಿಕಾರಿ, ಅಂಬ್ಲಿಗೊಳ ವಲಯ, ಅಂಬ್ಲಿಗೊಳ\(ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ)

**ಬಾಧ್ಯತೆದಾರರು** :: ಯಾರು ಕ್ಲೇಮು ಅರ್ಜಿ ಸಲ್ಲಿಸಿರುವುದಿಲ್ಲ.

**ಪ್ರಸ್ತಾವನೆ:–**

ದಿ:13–10–2010 ರಂದು ಮೂರು ವಾಹನಗಳಲ್ಲಿ ಸಾಗುವಾನಿ ನಾಟಾ ಅಕ್ರಮವಾಗಿ ಸಾಗಿಸುತ್ತಿರುವುದನ್ನು ಅಂಬ್ಲಿಗೊಳ ವಲಯದ ಅಂಬ್ಲಿಗೊಳ ಶಾಖೆಯ ವನಪಾಲಕ ಇವರು ಪತ್ತೆಹಚ್ಚಿ ಬರೆದ ಮಹಜರ್ ಈ ಕೆಳಗಿನಂತಿದೆ.

ದಿ:13–10–2010 ರಂದು ಅಂಬ್ಲಿಗೊಳ ಶಾಖೆಯ ವನಪಾಲಕ ಮತ್ತು ಸಿಬ್ಬಂದಿಯವರು ಮತ್ತು ಚೋರಡಿ ವಲಯದ ಸಿಬ್ಬಂದಿಯವರು ಸಾಗರ ತಾಲ್ಲೂಕ್, ಬೈರಾಪುರ ಗ್ರಾಮದ ಕರಡಿಬೆಟ್ಟ ಮನ್ನಾಜಂಗ್ಲಿಯ ಸಾಗುವಾನಿ ನೆಡುತೋಪಿನಲ್ಲಿ ರಾತ್ರಿ ಗಸ್ತು ತಿರುಗುತ್ತಾ ಬೋಳನಕಟ್ಟೆ ಕಡೆಗೆ ಹೋಗುತ್ತಿರುವಾಗ ಎರಡು ಮಾರುತಿವ್ಯಾನ್‌ಗೆ ಮರದ ತುಂಡುಗಳನ್ನು ತುಂಬುತ್ತಿರುವುದು ಮತ್ತು ಪಕ್ಕದಲ್ಲಿ ಒಂದು ಬೈಕ್ ನಿಂತಿರುವುದು ಬ್ಯಾಟರಿ ಬೆಳಕಿನ ಸಹಾಯದಿಂದ ಕಂಡುಬಂದಿತು. ಬ್ಯಾಟರಿ ಬೆಳಕನ್ನು ಹಾಕಿದ ಕೂಡಲೇ ಅಲ್ಲಿದ ಆಸಾಮಿಗಳು ಅಡ್ಡದಿಡ್ಡಿ ಓಡಿದರು. ಅವರಲ್ಲಿ ಒಬ್ಬನನ್ನು ಗೌತಮಪುರ ಶಾಖೆಯ ವನಪಾಲಕರು ಹಿಡಿದರು. ಉಳಿದವರು ಕತ್ತಲೆಯಲ್ಲಿ ಕಾಡಿನೊಳಗೆ ಓಡಿ ಕೈಗೇ ಸಿಗದೇ ಪರಾರಿಯಾದರು. ನಂತರ ಸಿಕ್ಕಿಬಿದ್ದ ಆಸಾಮಿಯನ್ನು ಮಾರುತಿವ್ಯಾನ್‌ಗಳ ಹತ್ತಿರ ಕರೆತಂದು ಪರಿಶೀಲಿಸಿ ನೋಡಲಾಗಿ ಒಂದನೇ ವಾಹನ ಮಾರುತಿ ವ್ಯಾನ್ ಕೆಎ–25–ಎಂ–2056, ಎರಡನೇ ವಾಹನ ಮಾರುತಿ ವ್ಯಾನ್ ಜಿಎ–02–ಎ–4598 ಮತ್ತು ಮೂರನೇ ವಾಹನ ಹಿರೋಹೊಂಡಾ ಸಿಡಿ–100 ಬೈಕ್ ಕೆಎ–15–ಇ–3305 ಆಗಿರುತ್ತದೆ. ಈ ವಾಹನದೊಳಗಡೆ ಪರಿಶೀಲಿಸಿ ನೋಡಲಾಗಿ ಹಸಿಯಾದ ಆಗತಾನೆ ಕಡಿದ ಸಾಗುವಾನಿ ನಾಟಾ 13=0.740 ಎಂ3 ಪ್ರಮಾಣವಿದ್ದು, ಈ ತುಂಡುಗಳನ್ನು ಕೈಗರಗಸದಿಂದ ಕೊಯ್ತು ಮಾಡಿದಾಗಿದ್ದು, ಈ ತುಂಡುಗಳನ್ನು ಸಾಗಿಸಲು ರಹದಾರಿ ಇಲ್ಲವೆಂದು ಸಿಕ್ಕಿಬಿದ್ದ ಆಸಾಮಿ ಬಸವರಾಜ್ ಬಿನ್ ಚೆನ್ನಬಸಪ್ಪ, 24 ವರ್ಷ, ಚೆನ್ನಕೇಶವನಗರ, ಶಿಕಾರಿಪುರ ವಾಸಿ ಎಂದು ಹೇಳಿದನು. ಹಾಗೂ ಈ ತುಂಡುಗಳನ್ನು ಜಿಯಾವುಲ್ಲಾ ಇವರ ನಿರ್ದೇಶನದಂತೆ ಕಾಡಿನಿಂದ ಈ ವಾಹನಗಳಲ್ಲಿ ಸಾಗಿಸಲು ಬಂದಿದೆಂದು ಮತ್ತು ಓಡಿಹೋದ 6 ಜನರ ಹೆಸರು ಮತ್ತು ವಿಳಾಸ ವಿಚಾರಿಸಲಾಗಿ 1)ಜಿಯಾವುಲ್ಲಾ ಬಿನ್ ಬಾಬಾಜಾನ್ ಸಾಬ್, 47 ವರ್ಷ, ದೇವರಾಜಅರಸು ಬಡಾವಣೆ, ಶಿಕಾರಿಪುರ ವಾಸಿ. 2)ಎಲಿಗೆ ಸಿದ್ದ ಬಿನ್ ಎಳಗಾರು ರಾಮಪ್ಪ, 30 ವರ್ಷ,ಆಶ್ರಯಾ ಬಡಾವಣೆ ಸಂತೆ ಮಾರ್ಕೆಟ್ ಹಿಂಭಾಗ ಶಿಕಾರಿಪುರ ವಾಸಿ 3)ಲಕ್ಷ್ಮಣ ಬಿನ್ ಲೋಕಪ್ಪ, 30 ವರ್ಷ, ಆಶ್ರಮ ಬಡಾವಣೆ, ಕೆ.ಇ.ಬಿ. ಹಿಂಭಾಗ ಶಿಕಾರಿಪುರ ಟೌನ್ 4)ಕೃಷ್ಣ ಬಿನ್ ರಾಮಣ್ಣ, 28 ವರ್ಷ, ಆಶ್ರಮ ಬಡಾವಣೆ, ಕೆ.ಇ.ಬಿ. ಹಿಂಭಾಗ ಶಿಕಾರಿಪುರ ಟೌನ್ 5)ಕುಮಾರ್ ಬಿನ್ ಕೆರಿಯಪ್ಪ, 29 ವರ್ಷ, ಆಶ್ರಮ ಬಡಾವಣೆ, ಕೆ.ಇ.ಬಿ. ಹಿಂಭಾಗ ಶಿಕಾರಿಪುರ ಟೌನ್ 6)ಸೈಫ್‌ವುಲ್ಲಾ ಆಶ್ರಮ ಬಡಾವಣೆ, ಕೆ.ಇ.ಬಿ. ಹಿಂಭಾಗ ಶಿಕಾರಿಪುರ ಟೌನ್ ಎಂದು ಮತ್ತು ಎಲಿಗೆ ಸಿದ್ದ ಎನ್ನುವವರ ಮಾರುತಿ ವ್ಯಾನಿನಲ್ಲಿ ಬಂದಿರುತ್ತೆವೆಂದು, ಹಲಗೇರಿ ಸತೀಶ ಬಿನ್ ನಾಗಪ್ಪ, 28 ವರ್ಷ, ಮತ್ತು ರಾಘವೇಂದ್ರ ಬಿನ್ ನಾಗಪ್ಪ, ಡ್ಯಾಂ ಹೊಸೂರು ವಾಸಿ, ಸಾಗರ ತಾಲ್ಲೂಕ್ ಇವರ ಮನೆ ಬಳಿ ದಾಸ್ತನಿಟ್ಟ ಸಾಗುವಾನಿ ನಾಟಾಗಳನ್ನು ತೋರಿಸಿದನು. ಆದ್ದರಿಂದ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ಆಸಾಮಿ, ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತು ವರದಿಯೊಂದಿಗೆ ಇಲಾಖಾ ಪರ ಜಪ್ತುಪಡಿಸಿಕೊಂಡು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 24, 71(ಎ), 104(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969 ಉಪನಿಯಮ 144, 165ರ ಪ್ರಕಾರ ವನಪಾಲಕರು ಅರಣ್ಯ ಮೊಕದ್ದಮೆ ಸಂಖ್ಯೆ:57/10–11ನ್ನು ದಾಖಲಿಸಿ, ನಂತರ ವಲಯ ಅರಣ್ಯಾಧಿಕಾರಿ, ಅಂಬ್ಲಿಗೊಳ ವಲಯ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ.

ನಂತರ ವಲಯ ಅರಣ್ಯಾಧಿಕಾರಿ, ಅಂಬ್ಲಿಗೊಳ ವಲಯ ಇವರು ಆಸಾಮಿಯನ್ನು ಜೆ.ಎಂ.ಎಫ್.ಸಿ. ನ್ಯಾಯಾಲಯಕ್ಕೆ ಒಪ್ಪಿಸಿ, ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ವಾಹನವನ್ನು ಸುರಕ್ಷತೆಗಾಗಿಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ಈ ನ್ಯಾಯಾಲಯದಿಂದ ಆದೇಶವಾಗಿದೆ.

ನಂತರ ಎರಡು ವಾಹನಗಳ ಬಗ್ಗೆ ಈ ನ್ಯಾಯಾಲಯದಿಂದ 'ಬಿ' ಎಕ್ಸ್‌ಟ್ರ್ಯಾಕ್ಟನನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಬಿ3–ಅಮೊ–ವಾಹನ–ವಿವ–20/10–11 ದಿ:27–11–2010ರಂದು ಪ್ರಾದೇಶಿಕಸಾರಿಗೆ ಅಧಿಕಾರಿ, ಸಾಗರ ಮತ್ತು ಧಾರವಾಡ ಇವರಿಗೆ ದಿ:17–10–2011, 14–02–2011, 29–02–2012 ರಂದು ಪತ್ರ ಬರೆದಿದು ಕೋರಲಾದೆ. ಮತ್ತು ಜಿಎ–02–ಎ4598ರ ವಾಹನದ ಬಗ್ಗೆ " The Director of Transport Commissioner, Panji – Goa" ಇವರಿಗೆ ಈ ನ್ಯಾಯಾಲಯದಿಂದ B3-FOC-VEH-CR-20/10-11 Dt:27–10–2010 ರಂದು ಪತ್ರ ಬರೆದು 'ಬಿ' ಎಕ್ಸ್‌ಟ್ರ್ಯಾಕ್ಟನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಕೋರಲಾಯಿತು. ಆದರೆ ಇವರಿಂದ ಇಲ್ಲಿಯವರೆಗೂ ಯಾವುದೇ ಮಾಹಿತಿ ಲಭ್ಯವಾಗಿರುವುದಿಲ್ಲ.

ಈ ನಡುವೆ ಈ ವಾಹನದ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ ಬಿ3–ಅಮೊ–ವಾಹನ–ವಿವ–29/10–11 ದಿ:14–12–2010ರಂದು ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಬೆಂಗಳೂರು ಮತ್ತು ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ಗೆಜೆಟ್ ಮತ್ತು ದಿನಪ್ರತಿಕೆಯಲ್ಲಿ ಪ್ರಕಟಿಸಲು ಕೋರಲಾಯಿತು. ಅದರಂತೆ, ದಿ:21–12–2010ರಂದು ವಿಜಯ ಕರ್ನಾಟಕ ದಿನಪತ್ರಿಕೆಯಲ್ಲಿ ಮತ್ತು ದಿ:13–01–2011 ರಂದು ರಾಜ್ಯ ಗೆಜೆಟ್ ಪತ್ರಿಕೆಯಲ್ಲಿ ಈ ಪ್ರಕಟಣೆಯು ಪ್ರಕಟಗೊಂಡಿರುತ್ತದೆ. ಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ವಾಹನ ಮಾಲೀಕರಿರಾಗಲೀ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಕ್ಲೇಮು ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

ಸಹಾಯಕ ಸರ್ಕಾರಿ ಅಭಿಯೋಜಕರು ದಿ:19–05–2012ರಂದು ವಾದ ಮಂಡಿಸಿ, ಸದರಿ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಸಾಗಿಸುತ್ತಿರುವಾಗ ಮಾಲು ಸಹಿತ ಅಂಬ್ಲಿಗೊಳ ವಲಯದ ವನಪಾಲಕರು ಮತ್ತು ಸಿಬ್ಬಂದಿಯವರು ಪತ್ತೆಹಚ್ಚಿ ಕ್ರಿಮಿನಲ್ ಕೇಸ್ ದಾಖಲಿಸಿರುತ್ತಾರೆ. ಕೇಸ್ ದಾಖಲಿಸಿದ ಬಗ್ಗೆ ಪ್ರಥಮ ವರ್ತಮಾನ ವರದಿ, ಜಪ್ತಿ ವರದಿಯನ್ನು ವಲಯ ಅರಣ್ಯಾಧಿಕಾರಿ, ಅಂಬ್ಲಿಗೊಳ ವಲಯ ಇವರು ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಇದರಿಂದ ಈ ವಾಹನದಲ್ಲಿ ಬೀಟೆ ನಾಟಾಗಳನ್ನು ಅಕ್ರಮವಾಗಿ ಸಾಗಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿದೆ. ಹಾಗೂ ಈ ವಾಹನದ ಬಗ್ಗೆ ಹೆಚ್ಚಿನ ಪ್ರಚಾರಕ್ಕಾಗಿ ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಮತ್ತು ದಿನಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದ್ದರಿಂದ ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಆರ್.ರವಿಶಂಕರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಅರಣ್ಯ ಮೊಕದ್ದಮೆಯಲ್ಲಿ ಜಪ್ತು ಮಾಡಿದ ವಾಹನ (1)ಮಾರುತಿ ವ್ಯಾನ್ ಕೆಎ–25–ಎಂ–2056 2)ಮಾರುತಿ ವ್ಯಾನ್ ಜಿಎ–02–ಎ–4598 3)ಹಿರೋಹೊಂಡಾ ಸಿಡಿ–100 ಬೈಕ್ ಕೆಎ–15–ಇ–3305 ಮತ್ತು ಸಾಗುವಾನಿ ನಾಟಾ 13=0.740 ಎಂ3ನ್ನು ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದ್ದೇನೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ **ದಿ: 16–06–2012** ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

**ಆರ್.ರವಿಶಂಕರ್**
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ

**ಪಿ.ಆರ್. 888**

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ

**ಬಿ3:ಅಮೊ:ವಾಹನ:ವಿವ:21/10–11 ದಿನಾಂಕ:16–06–2012**

| | | |
|---|---|---|
| **ಉಪಸ್ಥಿತರು** | :: | ಆರ್.ರವಿಶಂಕರ್, ಭಾ.ಅ.ಸೇ. ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ. |
| **ಪಿರ್ಯಾಧಿದಾರರು** | :: | ವಲಯ ಅರಣ್ಯಾಧಿಕಾರಿ, ಆನವಟ್ಟಿ ವಲಯ, ಆನವಟ್ಟಿ (ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ) |
| **ಬಾಧ್ಯತೆದಾರರು** | :: | ಯಾರು ಕ್ಲೇಮು ಅರ್ಜಿ ಸಲ್ಲಿಸಿರುವುದಿಲ್ಲ. |

**ಪ್ರಸ್ತಾವನೆ:–**

ದಿ:20–10–2010 ರಂದು ಒಂದು ವಾಹನದಲ್ಲಿ ಸಾಗುವಾನಿ ನಾಟಾ ಅಕ್ರಮವಾಗಿ ಸಾಗಿಸುತ್ತಿರುವುದನ್ನು ಆನವಟ್ಟಿ ವಲಯದ ವಲಯ ಅರಣ್ಯಾಧಿಕಾರಿ ಇವರು ಪತ್ತೆಹಚ್ಚಿ ಬರೆದ ಮಹಜರ್ ಈ ಕೆಳಗಿನಂತಿದೆ.

ದಿ:20–10–2010 ರಂದು ಆನವಟ್ಟಿ ವಲಯದ ವಲಯ ಅರಣ್ಯಾಧಿಕಾರಿ ಮತ್ತು ಸಿಬ್ಬಂದಿಯವರು ಸೊರಬ ತಾಲ್ಲೂಕ್, ಕುಪ್ಪಗಡ್ಡೆ ಹೋಬಳಿ, ತುಡ್ನೂರು ಗ್ರಾಮದ ಸಮೀಪ ತುಡ್ನೂರಿನಿಂದ ಬೆಟ್ಟದಕುರ್ಲಿಗೆ ಹೋಗುವ ರಸ್ತೆಯ ಬಲಭಾಗದಲ್ಲಿರುವ ಸಾಗುವಾನಿ ನೆಡುತೋಪಿನಲ್ಲಿ ಬೆಳಗ್ಗಿನ ಜಾವ 4–00 ಗಂಟೆ ಸಮಯದಲ್ಲಿ ಗಸ್ತು ತಿರುಗುತ್ತಿರುವಾಗ ಒಂದು ವಾಹನಕ್ಕೆ ನಾಟಾ ತುಂಬುತ್ತಿರುವುದು ಕಂಡುಬಂದಿತು. ಇಲಾಖೆಯವರು ಸುತ್ತವರಿದು ಆರೋಪಿಯನ್ನು ಹಿಡಿಯಲು ಪ್ರಯತ್ನಿಸಿದಾಗ ಒಬ್ಬನು ಕೈಗೆ ಸಿಕ್ಕಿದನು ಉಳಿದ ಜನ ಕತ್ತಲೆಯಲ್ಲಿ ಓಡಿ ಪರಾರಿಯಾದರು. ನಂತರ ವಾಹನ ಪರಿಶೀಲಿಸಿದಾಗ ವಾಹನದೊಳಗಡೆ 06 ಸಾಗುವಾನಿ ತುಂಡುಗಳಿದ್ದು, ಇತರೆ 08 ತುಂಡುಗಳು ಕೆಳಭಾಗದಲ್ಲಿದ್ದವು. ಸಿಕ್ಕಿಬಿದ್ದ ಆಸಾಮಿಯ ಹೆಸರು ವಿಚಾರಿಸಲಾಗಿ ಮುನ್ವರ್‌ಷಾ ಬಿನ್ ಲತೀಫ್, ಮಕಂದರ್ ಪ್ಲಾಟ್ ಬೆಳಗೇರಿ ರೋಡ್ ಚಿಕ್ಕೆರೂರು, ಹಿರೇಕೆರೂರು ತಾಲ್ಲೂಕ್ ಎಂದು ಮತ್ತು ಇವನು ಈ ವಾಹನದ ಮಾಲೀಕನೆಂದು ಓಡಿ ಹೋದವನ ಹೆಸರು, ವಿಳಾಸ ಕೇಳಲಾಗಿ ಚಿಕ್ಕೆರೂರು ವಾಸಿಗಳಾದ ದಾದಾಫೀರ್ ಬಿನ್ ಇಬ್ರಾಹಿಂಸಾಬ್, ಸವಣೂರು ಮತ್ತು ನೌಷಾದ್ ಮಕುಂದರ್ ಸಾಬ್ ಬಿನ್ ಗನ್ನೀಸಾಬ್ ಮತ್ತು ತುಡ್ನೂರು ಗ್ರಾಮದ ಚೆನ್ನಬಸಪ್ಪ, ಬಣಕರ್ ಬಿನ್ ಲೋಕಪ್ಪ ಬಣಕರ್, 32 ವರ್ಷ, ರಫೀಕ್‌ಬಿನ್ ಮಹ್ಮದ್ ಗೌಸ್, 26 ವರ್ಷ, ತುಕರಾಮ್ ಬಿನ್ ಬಂಕಸಾಣದ ಗುತ್ಯಪ್ಪ, ಇಸಾಕ್ ಬಿನ್ ಮಹ್ಮದ್ ಹನೀಫ್ ಇದ್ದರೆಂದು ತಿಳಿಸಿದನು. ನಂತರ ವಾಹನ ಪರಿಶೀಲಿಸಲಾಗಿ ಟಾಟಾ–407 ನೊಂದಣಿ ಸಂ:ಕೆಎ–20–1654 ಆಗಿರುತ್ತದೆ. ಈ ವಾಹನದೊಳಗಿದ್ದ ಸಾಗುವಾನಿ ನಾಟಾವು ಹಸಿಯಾಗಿದ್ದು, ಈ ತುಂಡುಗಳ ಮೇಲೆ ಇಲಾಖಾ ಛಾಪಾದ ಗುರುತಿರಲಿಲ್ಲ. ನಾಟಾಗಳ ಒಟ್ಟು ಅಳತೆ 14=1.455 ಎಂ3 ಪ್ರಮಾಣವಿರುತ್ತದೆ, ಈ ನಾಟಾವನ್ನು ಒಟ್ಟು 08 ಮರಗಳಿಂದ ತಯಾರಿಸಿರುತ್ತಾರೆ. ಆದ್ದರಿಂದ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ಆಸಾಮಿ, ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತು ವರದಿಯೊಂದಿಗೆ ಇಲಾಖಾ ಪರ ಜಪ್ತುಪಡಿಸಿಕೊಂಡು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 24,

71(ಎ), 62 ಮತ್ತು ಕರ್ನಾಟಕ ಅರಣ್ಯ ಕಾನೂನು 1969 ಉಪನಿಯಮ 144, 165ರ ಪ್ರಕಾರ ವಲಯ ಅರಣ್ಯ ಅದಿಕಾರಿ ಅರಣ್ಯ ಮೊಕದ್ದಮೆ ಸಂಖ್ಯೆ:73/10–11ನ್ನು ದಾಖಲಿಸಿ, ನಂತರ ಆಸಾಮಿಯನ್ನು ಜೆ.ಎಂ.ಎಫ್.ಸಿ. ನ್ಯಾಯಾಲಯ ಸೊರಬಕ್ಕೆ ಒಪ್ಪಿಸಿ, ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ವಾಹನವನ್ನು ಸುರಕ್ಷತೆಗಾಗಿಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ಈ ನ್ಯಾಯಾಲಯದಿಂದ ಆದೇಶವಾಗಿದೆ.

ನಂತರ ಈ ವಾಹನದ 'ಬಿ' ಎಕ್ಸ್‌ಟ್ರ್ಯಾಕ್ಟನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಈ ನ್ಯಾಯಾಲಯದಿಂದ ಬಿ3–ಅಮೊ–ವಾಹನ–ವಿವ–21/10–11 ದಿ:29–11–2010ರಂದು ಸಾರಿಗೆ ಅಧಿಕಾರಿ, ಉಡುಪಿ ಇವರಿಗೆ ಪತ್ರ ಬರೆದು ಕೋರಲಾಯಿತು. ಸಾರಿಗೆ ಅಧಿಕಾರಿ, ಉಡುಪಿ ಇವರು ದಿ:30–12–2010 ರಂದು ಈ ನ್ಯಾಯಾಲಯಕ್ಕೆ ಒದಗಿಸಿರುತ್ತಾರೆ. ಈ 'ಬಿ' ಎಕ್ಸ್‌ಟ್ರ್ಯಾಕ್ಟನಲ್ಲಿ ಅರ್.ಸಿ. ಮಾಲೀಕರ ಹೆಸರು ಶ್ರೀ ಸಂಜೀವ ಬಿನ್ ಮುಟ್ಟನಾಯ್ಕ, ಹಟ್ಟಿಯಂಗಡಿ–ಅಂಚೆ ಕುಂದಾಪುರ ತಾಲ್ಲೂಕ್ ಎಂದಿರುತ್ತದೆ. ಈ ಅರ್.ಸಿ. ಮಾಲೀಕರಿಗೆ ನೋಟಿಸ್‌ನ್ನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಬಿ)(I)ರ ಪ್ರಕಾರ ನೊಂದಣಿ ಅಂಚೆ ಮೂಲಕ ಜಾರಿ ಮಾಡಿದೆ.

ಈ ನಡುವೆ ಈ ವಾಹನದ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ ಬಿ3–ಅಮೊ–ವಾಹನ–ವಿವ–29/10–11 ದಿ:14–12–2010ರಂದು ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಬೆಂಗಳೂರು ಮತ್ತು ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ಗೆಜೆಟ್ ಮತ್ತು ದಿನಪ್ರತಿಕೆಯಲ್ಲಿ ಪ್ರಕಟಿಸಲು ಕೋರಲಾಯಿತು. ಅದರಂತೆ, ದಿ:21–12–2010ರಂದು ವಿಜಯ ಕರ್ನಾಟಕ ದಿನಪತ್ರಿಕೆಯಲ್ಲಿ ಮತ್ತು ದಿ:13–01–2011 ರಂದು ರಾಜ್ಯ ಗೆಜೆಟ್ ಪತ್ರಿಕೆಯಲ್ಲಿ ಈ ಪ್ರಕಟಣೆಯು ಪ್ರಕಟಗೊಂಡಿರುತ್ತದೆ. ಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ವಾಹನ ಮಾಲೀಕರಿರಾಗಲೀ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಕ್ಲೇಮು ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

ಸಹಾಯಕ ಸರ್ಕಾರಿ ಅಭಿಯೋಜಕರು ದಿ:19–05–2012ರಂದು ವಾದ ಮಂಡಿಸಿ, ಸದರಿ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಸಾಗಿಸುತ್ತಿರುವಾಗ ಮಾಲು ಸಹಿತ ಆನವಟ್ಟಿ ವಲಯದ ವಲಯ ಅರಣ್ಯಾಧಿಕಾರಿ ಮತ್ತು ಸಿಬ್ಬಂದಿಯವರು ಪತ್ತೆಹಚ್ಚಿ ಕ್ರಿಮಿನಲ್ ಕೇಸ್ ದಾಖಲಿಸಿರುತ್ತಾರೆ. ಕೇಸ್ ದಾಖಲಿಸಿದ ಬಗ್ಗೆ ಪ್ರಥಮ ವರ್ತಮಾನ ವರದಿ, ಜಪ್ತಿ ವರದಿಯನ್ನು ವಲಯ ಅರಣ್ಯಾಧಿಕಾರಿ, ಆನವಟ್ಟಿ ವಲಯ ಇವರು ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಇದರಿಂದ ಈ ವಾಹನದಲ್ಲಿ ಬೀಟೆ ನಾಟಾಗಳನ್ನು ಅಕ್ರಮವಾಗಿ ಸಾಗಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿದೆ. ಹಾಗೂ ಈ ವಾಹನದ ಬಗ್ಗೆ ಹೆಚ್ಚಿನ ಪ್ರಚಾರಕ್ಕಾಗಿ ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಮತ್ತು ದಿನಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದ್ದರಿಂದ ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಆರ್.ರವಿಶಂಕರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಅರಣ್ಯ ಮೊಕದ್ದಮೆಯಲ್ಲಿ ಜಪ್ತು ಮಾಡಿದ ವಾಹನ ಟಾಟಾ–407 ನೊಂದಣಿ ಸಂ:ಕೆಎ–20–1654 (ಇಂಜಿನ್ ನಂ.5762) ಮತ್ತು ಸಾಗುವಾನಿ ನಾಟಾ 14=1.455 ಎಂ3ನ್ನು ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದ್ದೇನೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ **ದಿ:16–06–2012** ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

**ಆರ್.ರವಿಶಂಕರ್**
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ

**ಪಿ.ಆರ್. 889**

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**

**ಬಿ3:ಅಮೊ:ವಾಹನ:ವಿವ:22/10–11 ದಿನಾಂಕ: 16–06–2012**

**ಉಪಸ್ಥಿತರು** : ಆರ್.ರವಿಶಂಕರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ

**ಪಿರ್ಯಾಧಿದಾರರು** : ವಲಯ ಅರಣ್ಯಾಧಿಕಾರಿ, ಆನಂದಪುರಂ ವಲಯ, ಚೋರಡಿ (ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ)

**ಬಾಧ್ಯತೆದಾರರು** : ಯಾರು ಕ್ಲೇಮು ಅರ್ಜಿ ಸಲ್ಲಿಸಿರುವುದಿಲ್ಲ.

**ಪ್ರಸ್ತಾವನೆ:–**

ದಿ:22–10–2010ರಂದು ಎರಡು ವಾಹನಗಳಲ್ಲಿ ಬೀಟೆ ನಾಟಾ ಅಕ್ರಮವಾಗಿ ಸಾಗಾಣಿಕೆ ಮಾಡುತ್ತಿರುವುದನ್ನು ಆನಂದಪುರಂ ವಲಯದ ವನಪಾಲಕ ಇವರು ಪತ್ತೆಹಚ್ಚಿ ಬರೆದ ಮಹಜರ್ ಈ ಕೆಳಗಿನಂತಿದೆ.

ದಿ:22–10–2010ರಂದು ಆನಂದಪುರಂ ವಲಯದ ತುಪ್ಪೂರು ಶಾಖೆಯ ವನಪಾಲಕ ಮತ್ತು ಸಿಬ್ಬಂದಿಯವರು ಸಾಗರ ತಾಲ್ಲೂಕ್ ಆನಂದಪುರಂ ಹೋಬಳಿ ಗಿಳಾಲುಗುಂಡಿ ಗ್ರಾಮದ ಸ.ನಂ.29ರ ಗಿಳಾಲುಗುಂಡಿ ಮೀಸಲು ಅರಣ್ಯದಲ್ಲಿ ರಾತ್ರಿ ಗಸ್ತು ಮಾಡುತ್ತಿರುವಾಗ ಪತ್ರೆ ಹೊಂಡದ ಬಳಿ ಗಡಿಕಲ್ಲಿಗೆ ಹೋಗುವ ಗಾಡಿರಸ್ತೆಯಲ್ಲಿ ಬೆಳಗ್ಗಿನ ಜಾವ 5–30ರ ಸಮಯದಲ್ಲಿ ಒಂದು ವಾಹನ ಮಾರುತಿ ವ್ಯಾನ್ ನಂ: KA-16-M-194 ಬರುತ್ತಿರುವುದನ್ನು ನಿಲ್ಲಿಸಲು ಸೂಚಿಸಿದಾಗ ಸದರಿ ವಾಹನ ಸುಮಾರು 50 ಮೀಟರ್ ದೂರದಲ್ಲಿ ನಿಲ್ಲಿಸಿ ವಾಹನದಲ್ಲಿದ್ದ ಅಸಾಮಿಗಳು ಓಡಲು ಪ್ರಾರಂಭಿಸಿದರು. ಅವರನ್ನು ಇಲಾಖಾ ಸಿಬ್ಬಂದಿಯವರು ಬೆನ್ನಟ್ಟಿ 4 ಜನರನ್ನು ಹಿಡಿದಿರುತ್ತಾರೆ ಉಳಿದ ಜನ ಕೈಗೆ ಸಿಗದೆ ಪರಾರಿಯಾದರು. ಓಡಿಹೋದ ಅಸಾಮಿಗಳ ಹೆಸರು (1) ನಾಗರಾಜ್ ಅಲಿಯಾಸ್ ಬುಕ್ಕಿ ನಾಗ, ತಾಯಿ ತಿರುಕಮ್ಮ, 32 ವರ್ಷ ಚೌಡಿಹಳ್ಳಿವಾಸ, ಕಲ್ಮನೆ ಗ್ರಾಮ, ಶಿಕಾರಿಪುರ ತಾಲ್ಲೂಕ್ (2) ಫಕೀರ ಬಿನ್ ಹೊನ್ನುರಪ್ಪ ಚೌಡಿಹಳ್ಳಿ 28 ವರ್ಷ, ಶಿಕಾರಿಪುರ ತಾಲ್ಲೂಕ್ (3) ಬೇಗೂರು ರವಿ ಬಿನ್ ಪರಮೇಶ 32 ವರ್ಷ ಕಲ್ಮನೆ ವಾಸಿ ಮತ್ತು ಗ್ರಾಮ, ಶಿಕಾರಿಪುರ ತಾಲ್ಲೂಕ್ (4) ಧರ್ಮಾ ಬಿನ್ ಘಂಟೆಪ್ಪ 48 ವರ್ಷ ಕೋಣೆ ಹೊಸೂರು ಗ್ರಾಮ & ವಾಸಿ, ಶಿವಮೊಗ್ಗ ತಾಲ್ಲೂಕ್ (5) ನಾಗೇಂದ್ರ ಬಿನ್ ಕಲಗಪ್ಪ 28 ವರ್ಷ ಗೇರುಬೀಸು, ಯಡೆಹಳ್ಳಿ ಗ್ರಾಮ, ಸಾಗರ ತಾಲ್ಲೂಕ್ (6) ಮಹಾಬುಲಿ ಬಿನ್ ಪಕ್ರುಸಾಬ್ 30 ವರ್ಷ ಈಸೂರು ಗ್ರಾಮ, ಶಿಕಾರಿಪುರ ತಾಲ್ಲೂಕ್ (7) ಕಿರಣ ಬಿನ್ ನಾಗಪ್ಪ 19 ವರ್ಷ ಚೌಡಿಹಳ್ಳಿ ,ಕಲ್ಮನೆ ಗ್ರಾಮ, ಶಿಕಾರಿಪುರ ತಾಲ್ಲೂಕ್ (8) ದಯಾನಂದ ಬಿನ್ ನಾಗಪ್ಪ 22 ವರ್ಷ ಬಿಲಗೋಡಿ ವಾಸಿ, ಈಚಲಕೊಪ್ಪ ಗ್ರಾಮ ,ಸಾಗರ ತಾಲ್ಲೂಕ್ (9)ಜಿಕ್ರಿಯಾ ಬಿನ್ ಹುಸೇನ್ ಸಾಬ್ 30ವರ್ಷ ಅರಸಿನಗೆರೆ ಗ್ರಾಮ ಶಿಕಾರಿಪುರ ತಾಲ್ಲೂಕ್ (10) ಚಂದ್ರು ಬಿನ್ ಮಾರುತಪ್ಪ 23 ವರ್ಷ ಕಬ್ಬರಮನೆ, ಅರಸಿನಗೆರೆ, ಶಿಕಾರಿಪುರ ತಾಲ್ಲೂಕ್ ಸೆರೆಸಿಕ್ಕ ಅಸಾಮಿಗಳನ್ನು ವಾಹನ ನಿಂತಿದ್ದ ಸ್ಥಳಕ್ಕೆ ಕರೆದುಕೊಂಡು ಬಂದು ವಾಹನದೊಳಗಡೆ ಪರಿಶೀಲಿಸಿ ನೋಡಲಾಗಿ ವಾಹನದೊಳಗಡೆ ಹಸಿಯಾದ ಬೀಟೆ ನಾಟಾಗಳು ಇದ್ದವು. ಮತ್ತು ಮೋಟಾರ್ ಬೈಕ್ ಬಜಾಜ್ ಸಿಟಿ–100 ನಂಬರ್ KA-15-9156 ಆಗಿರುತ್ತದೆ. ಈ ಬೈಕಿನ ಪಕ್ಕದಲ್ಲಿ ಒಂದು ಬೀಟೆನಾಟಾ ಬಿದ್ದಿರುವುದು ಕಂಡುಬಂದಿತು. ಈ ತುಂಡುಗಳನ್ನು ಗರಗಸದಿಂದ ಕೊಯ್ತ ಮಾಡಲಾಗಿದೆ ಮತ್ತು ಈ ತುಂಡುಗಳ ಮೇಲೆ ಇಲಾಖಾ ಛಾಪಾದ ಗುರುತಿರಲಿಲ್ಲ. ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ಆಸಾಮಿಗಳನ್ನು, ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತುವರದಿಯೊಂದಿಗೆ ಇಲಾಖಾ ಪರ ಅಮಾನತು ಪಡಿಸಿಕೊಂಡು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 24, 62, 71(ಎ), 104(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969 ಉಪನಿಯಮ 144, 165ರ ಪ್ರಕಾರ ವನಪಾಲಕರು ಅರಣ್ಯ ಮೊಕದ್ದಮೆ ಸಂಖ್ಯೆ:78/10–11ನ್ನು ದಾಖಲಿಸಿರುತ್ತಾರೆ. ನಂತರ ಆಸಾಮಿಗಳನ್ನು, ವಾಹನವನ್ನು ಮತ್ತು ದಾಖಲೆಗಳೊಂದಿಗೆ ವಲಯ ಅರಣ್ಯಾಧಿಕಾರಿ, ಆನಂದಪುರಂ ವಲಯ ಚೋರಡಿ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ.

ನಂತರ ವಲಯ ಅರಣ್ಯಾಧಿಕಾರಿ, ಆನಂದಪುರಂ ವಲಯ ಚೋರಡಿ ಇವರು ಆಸಾಮಿಗಳನ್ನು ಜೆ.ಎಂ.ಎಫ್.ಸಿ.ಸಾಗರಕ್ಕೆ ಒಪ್ಪಿಸಿ, ಸದರಿ ವಾಹನ ಮತ್ತು ಎಲ್ಲಾ ದಾಖಲೆಗಳನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ಈ ನ್ಯಾಯಾಲಯದಿಂದ ಆದೇಶವಾಗಿದೆ.

ನಂತರ ಈ ವಾಹನಗಳ 'ಬಿ' ಎಕ್ಸ್‌ಟ್ರ್ಯಾಕ್ಟನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಸಾರಿಗೆ ಅಧಿಕಾರಿ ಸಾಗರ ಮತ್ತು ಚಿತ್ರದುರ್ಗ ಇವರಿಗೆ ಈ ನ್ಯಾಯಾಲಯದಿಂದ ಬಿ3:ಅ.ಮೊ:ವಾಹನ:ವಿವ:22/10–11 ದಿನಾಂಕ: 29–11–10, 14–2–2011 & 29–12–2011 ರಂದು 3 ಬಾರಿ ಪತ್ರ ಬರೆದು ಕೋರಲಾಯಿತು. ಈ ವಾಹನದ 'ಬಿ' ಎಕ್ಸ್‌ಟ್ರ್ಯಾಕ್ಟನ್ನು ಸಾರಿಗೆ ಅಧಿಕಾರಿ, ಸಾಗರ ಮತ್ತು ಚಿತ್ರದುರ್ಗ ಇವರು ಈ ನ್ಯಾಯಾಲಯಕ್ಕೆ ಒದಗಿಸಿರುವುದಿಲ್ಲ. ಆದ್ದರಿಂದ ಸದರಿ ಜಪ್ತಾದ ವಾಹನದ ಆರ್.ಸಿ. ಮಾಲೀಕರಿಗೆ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಬಿ)(I)ರ ಪ್ರಕಾರ ನೋಟಿಸ್ ನೀಡಲು ಸಾಧ್ಯವಾಗಲಿಲ್ಲ.

ಈ ನಡುವೆ ಈ ವಾಹನದ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ ಬಿ3–ಅಮೊ–ವಾಹನ–ವಿವ–29/10–11 ದಿ:14–12–2010ರಂದು ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಬೆಂಗಳೂರು ಮತ್ತು ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ಗೆಜೆಟ್ ಮತ್ತು ದಿನಪ್ರತಿಕೆಯಲ್ಲಿ ಪ್ರಕಟಿಸಲು ಕೋರಲಾಯಿತು. ಅದರಂತೆ, ದಿ:21–12–2010ರಂದು ವಿಜಯ ಕರ್ನಾಟಕ ದಿನಪತ್ರಿಕೆಯಲ್ಲಿ ಮತ್ತು ದಿ:13–01–2011ರಂದು ರಾಜ್ಯ ಗೆಜೆಟ್ ಪತ್ರಿಕೆಯಲ್ಲಿ ಈ ಪ್ರಕಟಣೆಯು ಪ್ರಕಟಗೊಂಡಿರುತ್ತದೆ. ಪತ್ರಿಕೆಯಲ್ಲಿ

ಪ್ರಕಟಗೊಂಡು 30 ದಿನಗಳಾದರೂ ವಾಹನ ಮಾಲೀಕರಿರಾಗಲೀ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಕ್ಲೇಮು ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

ಸಹಾಯಕ ಸರ್ಕಾರಿ ಅಭಿಯೋಜಕರು ದಿ:19–05–2012ರಂದು ವಾದ ಮಂಡಿಸಿ, ಸದರಿ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಸಾಗಿಸುತ್ತಿರುವಾಗ ಮಾಲು ಸಹಿತ ಆನಂದಪುರಂ ವಲಯದ ತುಪ್ಪೂರು ಶಾಖಾ ವನಪಾಲಕರು ಮತ್ತು ಸಿಬ್ಬಂದಿಯವರು ಪತ್ತೆಹಚ್ಚಿ ಕ್ರಿಮಿನಲ್ ಕೇಸ್ ದಾಖಲಿಸಿರುತ್ತಾರೆ. ಕೇಸ್ ದಾಖಲಿಸಿದ ಬಗ್ಗೆ ಪ್ರಥಮ ವರ್ತಮಾನ ವರದಿ, ಜಪ್ತಿ ವರದಿಯನ್ನು ವಲಯ ಅರಣ್ಯಾಧಿಕಾರಿ, ಆನಂದಪುರಂ ವಲಯ ಚೋರಡಿ ಇವರು ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಇದರಿಂದ ಈ ವಾಹನದಲ್ಲಿ ಬೀಟೆ ನಾಟಾಗಳನ್ನು ಅಕ್ರಮವಾಗಿ ಸಾಗಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿದೆ. ಹಾಗೂ ಈ ವಾಹನದ ಬಗ್ಗೆ ಹೆಚ್ಚಿನ ಪ್ರಚಾರಕ್ಕಾಗಿ ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಮತ್ತು ದಿನಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದ್ದರಿಂದ ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಆರ್.ರವಿಶಂಕರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಅರಣ್ಯ ಮೊಕದ್ದಮೆಯಲ್ಲಿ ಜಪ್ತು ಮಾಡಿದ ವಾಹನಗಳಾದ ಬಜಾಜ್ ಸಿ.ಟಿ. 100 ನಂ: ಬೈಕ್ ಕೆಎ–15–9156 (ಛಾಸ್ಸಿಸ್ ನಂ: DUFBLG21022, ಇಂಜಿನ್ ನಂ: Not visible) ಮತ್ತು ಮಾರುತಿ ವ್ಯಾನ್ ಕೆಎ–16–ಎಂ–194 (ಛಾಸ್ಸಿಸ್ ನಂ: 899882, ಇಂಜಿನ್ ನಂ: Not visible) ಮತ್ತು ಬೀಟೆ ನಾಟಾ 04=0.430ಎಂ3ನ್ನು ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದ್ದೇನೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ: 16–06–2012 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

**ಆರ್.ರವಿಶಂಕರ್**
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ

**ಪಿ.ಆರ್. 890**

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ

**ಬಿ3:ಅಮೊ:ವಾಹನ:ವಿವ:23/10–11 ದಿನಾಂಕ: 16–06–2012**

**ಉಪಸ್ಥಿತರು** :: ಆರ್.ರವಿಶಂಕರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಪಿರ್ಯಾಧಿದಾರರು** : ವಲಯ ಅರಣ್ಯಾಧಿಕಾರಿ,
ಶಿರಾಳಕೊಪ್ಪ ವಲಯ, ಶಿರಾಳಕೊಪ್ಪ
(ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ)

**ಭಾಧ್ಯತೆದಾರರು** : ಯಾರು ಕ್ಲೇಮು ಅರ್ಜಿ ಸಲ್ಲಿಸಿರುವುದಿಲ್ಲ

**ಪ್ರಸ್ತಾವನೆ:–**

ದಿ:29–10–2010 ರಂದು ಒಂದು ವಾಹನ ಟಿ.ವಿ.ಎಸ್ ಸಮುರಾಯ್ ಬೈಕ್ ಕೆಎ–17–ಜೆ–6788ರಲ್ಲಿ ಬೀಟೆ ನಾಟಾ ಅಕ್ರಮವಾಗಿ ಸಾಗಿಸುತ್ತಿರುವಾಗ ಶಿರಾಳಕೊಪ್ಪ ವಲಯದ ವನಪಾಲಕ ಇವರು ಪತ್ತೆಹಚ್ಚಿ ಬರೆದ ಮಹಜರ್ ಈ ಕೆಳಗಿನಂತಿದೆ.

ದಿ:29–10–2010 ರಂದು ಶಿರಾಳಕೊಪ್ಪ ವಲಯದ ಇಂಡುವಳ್ಳಿ ಶಾಖೆಯ ವನಪಾಲಕ ಮತ್ತು ಸಿಬ್ಬಂದಿಯವರು ಸೊರಬ ತಾಲ್ಲೂಕು ಉಳುವಿ ಹೋಬಳಿ ಇಂಡುವಳ್ಳಿ ಗ್ರಾಮದ ಹೆಸರಿಗೆ ಹೋಗುವ ರಸ್ತೆಯ ಕ್ರಾಸ್ ಹತ್ತಿರ ಗಸ್ತು ಮಾಡಿಕೊಂಡು ಬರುವಾಗ ಬೆಳಗ್ಗಿನ ಜಾವ ಸುಮಾರು 6–30ರ ಸಮಯದಲ್ಲಿ ಇಂಡುವಳ್ಳಿ ಕಡೆಯಿಂದ ಒಂದು ಬೈಕ್ ಬರುತ್ತಿತ್ತು. ಅದರಲ್ಲಿ ಇಬ್ಬರು ಆಸಾಮಿಗಳಿದ್ದರು, ಅವರು ಇಲಾಖೆಯವರನ್ನು ನೋಡಿ ಬೈಕನ್ನು ಅಲ್ಲೇ ಬಿಟ್ಟು ಕೈಗೇ ಸಿಗದೇ ಓಡಿ ಪರಾರಿಯಾದರು. ನಂತರ ಬೈಕನ್ನು ಪರಿಶೀಲಿಸಿ ನೋಡಲಾಗಿ ಟಿ.ವಿ.ಎಸ್. ಸಮೂರಾಯ್ ಬೈಕ್ ಕೆಎ–17–ಜೆ–6788 (ಛಾಸ್ಸಿಸ್ ನಂ: 1709F874192, ಇಂಜಿನ್ ನಂ: 1709M920309) ಆಗಿರುತ್ತದೆ. ಬೈಕ್‌ನ ಮೇಲೆ 04 ಬೀಟೆ ತುಂಡು ಕಟ್ಟಿರುವುದು ಕಂಡುಬಂದಿತು. ಈ ತುಂಡುಗಳ ಅಳತೆ ಮಾಡಲಾಗಿ 0.041 ಎಂ3 ಪ್ರಮಾಣವಿರುತ್ತದೆ. ಈ ತುಂಡುಗಳ ಮೇಲೆ ಇಲಾಖಾ ಛಾಪಾದ ಗುರುತಿರಲಿಲ್ಲ. ಆದ್ದರಿಂದ ಇದು ಅಕ್ರಮ

ನಂತರ ಈ ವಾಹನದ ಈ ಮರಗಳ 'ಬಿ' ಸಹಾಯಕ ಸಾರಿಗೆ ಅಧಿಕಾರಿ ಬೆಳಗಾಂ ಇವರಿಗೆ ಈ ನ್ಯಾಯಾಲಯದಿಂದ ಬಿ3:ಅ.ಮೊ:ವಾಹನ: 36/10–11 ದಿನಾಂಕ: 18–02–2011 ರಂದು ಪತ್ರ ಬರೆದು ಕೋರಲಾಯಿತು. ಈ ವಾಹನದ 'ಬಿ' ಎಕ್ಸ್‌ಟ್ರ್ಯಾಕ್ಟನ್ನು ಸಾರಿಗೆ ಅಧಿಕಾರಿ, ಬೆಳಗಾಂ ಇವರು ಈ ನ್ಯಾಯಾಲಯಕ್ಕೆ ಒದಗಿಸಿರುವುದಿಲ್ಲ. ಆದ್ದರಿಂದ ಸದರಿ ಜಪ್ತಾದ ವಾಹನದ ಆರ್.ಸಿ. ಮಾಲೀಕರಿಗೆ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಬಿ) (i)ರ ಪ್ರಕಾರ ನೋಟಿಸ್ ಜಾರಿಮಾಡಿರುವುದಿಲ್ಲ.

ಈ ನಡುವೆ ಈ ವಾಹನದ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ ಬಿ3–ಅಮೊ–ವಾಹನ–ವಿವ–38/10–11,ದಿ:17–03–2011ರಂದುಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಬೆಂಗಳೂರು ಮತ್ತು ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ಗೆಜೆಟ್ ಮತ್ತು ದಿನಪ್ರತಿಕೆಯಲ್ಲಿ ಪ್ರಕಟಿಸಲು ಕೋರಲಾಯಿತು. ಅದರಂತೆ, ದಿ:25–03–2011ರಂದು ಹೊಸದಿಗಂತ ದಿನಪತ್ರಿಕೆಯಲ್ಲಿ ಮತ್ತು ದಿ:05–05–2011ರಂದು ರಾಜ್ಯ ಗೆಜೆಟ್ ಪತ್ರಿಕೆಯಲ್ಲಿ ಈ ಪ್ರಕಟಣೆಯು ಪ್ರಕಟಗೊಂಡಿರುತ್ತದೆ. ಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ವಾಹನ ಮಾಲೀಕರಿರಾಗಲೀ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಕ್ಲೇಮು ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

ಸಹಾಯಕ ಸರ್ಕಾರಿ ಅಭಿಯೋಜಕರು ದಿ:19–05–2012ರಂದು ವಾದ ಮಂಡಿಸಿ, ಸದರಿ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಸಾಗಿಸುತ್ತಿರುವಾಗ ಮಾಲು ಸಹಿತ ಆನಂದಪುರಂ ವಲಯದ ತುಪ್ಪೂರು ಶಾಖಾ ವನಪಾಲಕರು ಮತ್ತು ಸಿಬ್ಬಂದಿಯವರು ಪತ್ತೆಹಚ್ಚಿ ಕ್ರಿಮಿನಲ್ ಕೇಸ್ ದಾಖಲಿಸಿರುತ್ತಾರೆ. ಕೇಸ್ ದಾಖಲಿಸಿದ ಬಗ್ಗೆ ಪ್ರಥಮ ವರ್ತಮಾನ ವರದಿ, ಜಪ್ತಿ ವರದಿಯನ್ನು ವಲಯ ಅರಣ್ಯಾಧಿಕಾರಿ, ಆನಂದಪುರಂ ವಲಯ ಚೋರಡಿ ಇವರು ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಇದರಿಂದ ಈ ವಾಹನದಲ್ಲಿ ಬೀಟೆ ಮತ್ತು ಸಾಗುವಾನಿ ನಾಟಾಗಳನ್ನು ಅಕ್ರಮವಾಗಿ ಸಾಗಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿದೆ. ಹಾಗೂ ಈ ವಾಹನದ ಬಗ್ಗೆ ಹೆಚ್ಚಿನ ಪ್ರಚಾರಕ್ಕಾಗಿ ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಮತ್ತು ದಿನಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದ್ದರಿಂದ ಈ ಪ್ರಕರಣದ ವಿದ್ಯಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಆರ್.ರವಿಶಂಕರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಅರಣ್ಯ ಮೊಕದ್ದಮೆಯಲ್ಲಿ ಜಪ್ತು ಮಾಡಿದ ವಾಹನವಾದ ಮಾರುತಿ ವ್ಯಾನ್ ನಂ: ಕೆಎ–22–ಎಂ–5652 (ಛಾಸ್ಸಿಸ್ ನಂ: ST91IN354791, ಇಂಜಿನ್ ನಂ: Not visible) ಮತ್ತು ಬೀಟೆ ನಾಟಾ 02=0.138ಎಂ3, ಸಾಗುವಾನಿ ನಾಟಾ 04=0.194ಎಂ3 ಒಟ್ಟು ನಾಟಾ 06=0.332ಎಂ3ನ್ನು ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದ್ದೇನೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ:16–06–2012 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

**ಆರ್.ರವಿಶಂಕರ್**

**ಪಿ.ಆರ್. 900**

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ

## ಪೊಲೀಸ್ ಇಲಾಖೆ

**ಪೊಲೀಸ್ ಕಮೀಷನರ್‌ರವರ ಕಛೇರಿ, ನಂ.1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ**

**ಸಂಖ್ಯೆ. 17/ಅಸೂ/ಅಸಿಪಿ/ಸಂವಿ/2012 ದಿನಾಂಕ: 02–06–2012**

**ಅಧಿಸೂಚನೆ**

ಬೆಂಗಳೂರು ನಗರ ದಿನೇ ದಿನೇ ಮಾಹಿತಿ ಮತ್ತು ಜೈವಿಕ ತಂತ್ರಜ್ಞಾನದಲ್ಲಿ ಬೆಳವಣಿಗೆ ಹೊಂದಿದಂತೆಲ್ಲಾ ಈ ಕ್ಷೇತ್ರಗಳಿಗೆ ಉದ್ಯೋಗಗಳನ್ನು ಅರಸಿಕೊಂಡು ಬರುವವರ ಸಂಖ್ಯೆಯಲ್ಲೂ ಹೆಚ್ಚಳಗೊಂಡು ಈ ರೀತಿ ಬಂದವರು ನಗರದಲ್ಲಿ ನೆಲೆಯೂರಿದ್ದರ ಪರಿಣಾಮ ಸಹಜವಾಗಿಯೇ ವಾಹನಗಳ ಸಂಖ್ಯೆ ಮತ್ತು ಭೂಮಿ ಬೇಡಿಕೆಯಲ್ಲಿ ಸಹ ಏರಿಕೆಗೊಂಡು ನಗರ ವ್ಯಾಪ್ತಿ ವಿಸ್ತಾರಗೊಂಡಿರುತ್ತದೆ. ಜನಸಂಖ್ಯೆಯ ಹೆಚ್ಚಳ ಮತ್ತು ನಗರ ವಿಸ್ತರಣೆಯ

ಜೊತೆಗೆ ಜನಸಾಮಾನ್ಯರಿಗೆ ಸಂಪರ್ಕದ ಸಮಸ್ಯೆ ಉಂಟಾಗಿ ಬಹುತೇಕ ಜನರು ಸಾರ್ವಜನಿಕ ಸಾರಿಗೆಯನ್ನು ಅವಲಂಭಿಸಿದೆ ಸ್ವಾವಲಂಬನೆಗೆ ಒಳಗಾಗಿದ್ದರ ಪರಿಣಾಮದಿಂದ ಖಾಸಗಿ ವಾಹನಗಳ ಹೆಚ್ಚಳದಲ್ಲಿ ಗಣನೀಯ ಏರಿಕೆಯಾಗಿದೆ.

ನಗರ ಪ್ರದೇಶದಲ್ಲಿ ವಿವಿಧ ಸ್ಥಳಗಳು ಮತ್ತು ರಸ್ತೆಗಳಲ್ಲಿನ ಸಂಚಾರದ ಹರಿವು, ದಟ್ಟಣೆ, ಸ್ಥಗಿತ ಇತ್ಯಾದಿಗಳು ಹಾಗೂ ಪರಿಹಾರದ ಬಗ್ಗೆ ಅಧ್ಯಯನ ನಡೆಸಲಾಯ್ತು. ಈ ಸಮೀಕ್ಷೆಯಲ್ಲಿ ಬನ್ನೇರುಘಟ್ಟ ಮುಖ್ಯ ರಸ್ತೆಯು ಪ್ರಮುಖವಾಗಿರುತ್ತದೆ. ಈ ರಸ್ತೆಯಲ್ಲಿ ಡೈರಿ ಸರ್ಕಲ್ ಆರಂಭವಾಗಿ ರಸ್ತೆಯ ಇಕ್ಕೆಲಗಳಲ್ಲಿ ಒರಾಕಲ್, ಐ.ಬಿ.ಎಂ ಮತ್ತು ಆಕ್ಸೆಂಚರ್ ಕಂಪನಿಗಳನ್ನು ಒಳಗೊಂಡಂತೆ ಇತರೆ ಕಂಪನಿಗಳು, ವ್ಯಾಪಾರ ಕೇಂದ್ರಗಳು, ಆಸ್ಪತ್ರೆಗಳು, ಮದುವೆ ಛತ್ರಗಳು ಇತ್ಯಾದಿಗಳು ಬೆಳವಣಿಗೆ ಹೊಂದಿ ಎಲ್ಲಾ ತರಹದ ವಾಹನಗಳ ಸಂಚಾರವಿದ್ದು ಸರಾಸರಿ ಪ್ರತಿ ಒಂದು ಗಂಟೆಗೆ 20,000 ಸಾವಿರ ವಾಹನಗಳು ಈ ರಸ್ತೆಗಳಲ್ಲಿ ಸಂಚರಿಸುತ್ತಿದ್ದು ಈ ರಸ್ತೆಯಲ್ಲಿ ಬರುವ ಸಾಗರ್ ಆಸ್ಪತ್ರೆ ಜಂಕ್ಷನ್ ಪ್ರಮುಖ ಜಂಕ್ಷನ್ ಆಗಿರುತ್ತದೆ. ಈ ಜಂಕ್ಷನ್‌ನಿಂದ ಗುರಪ್ಪನಪಾಳ್ಯ ಜಂಕ್ಷನ್ ನಡುವೆ ರಸ್ತೆಯು ಕೇವಲ 40 ಅಡಿ ಅಗಲ ಮತ್ತು 1 ಕಿ.ಮೀ ಉದ್ದವಿದ್ದು ದ್ವಿಮುಖ ಸಂಚಾರದಿಂದ ಕೂಡಿರುವ ಅತ್ಯಂತ ಕಿರಿದಾದ ರಸ್ತೆಯಾಗಿ ಅಡಚಣೆಯಿಂದ ಕೂಡಿದ ಪ್ರದೇಶವಾಗಿರುತ್ತದೆ. ಈ ರಸ್ತೆಯ ಮೂಲಕ ನಗರ ಒಳಭಾಗದ ಎಂ.ಜಿ. ರಸ್ತೆ, ಬ್ರಿಗೇಡ್ ರಸ್ತೆ, ಸಿಟಿ ಮಾರ್ಕೆಟ್, ಮೆಜೆಸ್ಟಿಕ್, ಏರ್‌ಪೋರ್ಟ್, ಜಯನಗರ ಇತ್ಯಾದಿ ಸ್ಥಳಗಳಿಗೆ ಹಾಗೂ ನಗರ ಹೊರಭಾಗದ ಮೈಕೋ ಲೇಔಟ್, ಬಿ.ಟಿ.ಎಂ ಲೇಔಟ್, ಜೆ.ಪಿ. ನಗರ, ಬಿಳೇಕಳ್ಳಿ, ಅರಕೆರೆ ಲೇಔಟ್, ಹುಳಿಮಾವು, ಬನ್ನೇರುಘಟ್ಟ, ಜಿಗಣಿ, ಹಾರಗದ್ದೆ, ಆನೇಕಲ್ ಮತ್ತು ಸುತ್ತಮುತ್ತಲ ಪ್ರದೇಶಗಳಿಗೆ ಹೋಗುವ ಮತ್ತು ಆ ಸ್ಥಳಗಳಿಂದ ನಗರ ಒಳ ಭಾಗದ ಪ್ರದೇಶಗಳಿಗೆ ಸಂಪರ್ಕ ಕಲ್ಪಿಸುವ ಏಕೈಕ ಮಾರ್ಗವಾಗಿದೆ.

ಸಾಗರ್ ಆಸ್ಪತ್ರೆ ಜಂಕ್ಷನ್‌ನಲ್ಲಿನ ವಾಹನ ದಟ್ಟಣೆಯನ್ನು 3 ಹಂತದ ಸೈಕಲ್ ಸಮಯವನ್ನು ಒಳಗೊಂಡ ಟ್ರಾಫಿಕ್ ಸಿಗ್ನಲ್ ನಿಯಂತ್ರಿಸಲ್ಪಡುತ್ತದೆ. ಈ ಜಂಕ್ಷನ್‌ನ ಪಶ್ಚಿಮ ಭಾಗದಲ್ಲಿ ತಿಲಕನಗರ ಸುತ್ತುವರೆದಿದ್ದು ಈ ಪ್ರದೇಶವು ಎಲ್ಲಾ ತರಹದ ವಾಣಿಜ್ಯ ಚಟುವಟಿಕೆಗಳನ್ನು ಒಳಗೊಂಡಿರುತ್ತದೆ. ಈ ರಸ್ತೆಗಳಲ್ಲಿ ಎಲ್ಲಾ ರೀತಿಯ ವಾಹನಗಳ ಸಂಚಾರ ಇದ್ದು ಪೀಕ್ ಅವಧಿಯಲ್ಲಿ ಬನ್ನೇರುಘಟ್ಟ ಮುಖ್ಯ ರಸ್ತೆ ಮತ್ತು ತಿಲಕನಗರ ರಸ್ತೆಗಳಲ್ಲಿ ವಾಹನ ಸಂಚಾರ ದಟ್ಟಣೆ ಅಧಿಕಗೊಂಡು ವಾಹನಗಳ ಸುಗಮ ಸಂಚಾರಕ್ಕೆ ಅನಾನುಕೂಲವಾಗುತ್ತಿರುವುದಲ್ಲದೆ ಪದೇ ಪದೇ ಸಂಚಾರ ಸ್ಥಗಿತಗೊಳ್ಳಲು ಹಾಗೂ ಅಪಘಾತಗಳಿಗೆ ಕಾರಣವಾಗಿರುತ್ತೆ.

ಈ ಮೇಲ್ಕಂಡ ಸಾಗರ್ ಆಸ್ಪತ್ರೆ ಜಂಕ್ಷನ್ ಹಾಗೂ ಸುತ್ತಮುತ್ತಲಿನ ರಸ್ತೆಗಳಲ್ಲಿ ಸಾರ್ವಜನಿಕ ವಾಹನಗಳ ಸುಗಮ ಸಂಚಾರಕ್ಕೆ ಅನುವು ಮಾಡಿಕೊಡುವುದಲ್ಲದೆ ಸಂಭವಿಸುತ್ತಿರುವ ರಸ್ತೆ ಅಪಘಾತಗಳನ್ನು ನಿಯಂತ್ರಿಸುವ ಸಲುವಾಗಿ ಸಂಚಾರ ಮಾರ್ಪಾಡುಗಳನ್ನು ಮಾಡುವ ಬಗ್ಗೆ ಚರ್ಚಿಸಲಾಗಿರುತ್ತದೆ. ಪ್ರಯುಕ್ತ ಸಾರ್ವಜನಿಕ ಹಿತಾಸಕ್ತಿ ಗಮನಿಸಿ ಈ ರಸ್ತೆಗಳಲ್ಲಿ ವಾಹನ ದಟ್ಟಣೆಯನ್ನು ತಗ್ಗಿಸಲು ಹಾಗೂ ಸುಗಮ ಸಂಚಾರಕ್ಕೆ ಅನುವು ಮಾಡಿಕೊಡುವ ಹಾಗೂ ಅಪಘಾತಗಳನ್ನು ತಪ್ಪಿಸುವ ಸಲುವಾಗಿ ಏಕಮುಖ ಸಂಚಾರ ವ್ಯವಸ್ಥೆ ಹಾಗೂ ಇನ್ನಿತರೆ ಸಂಚಾರ ಮಾರ್ಪಾಡುಗಳನ್ನು ಜಾರಿಗೆ ತರುವುದು ಅವಶ್ಯಕವಾಗಿರುತ್ತದೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಬಿ.ಜಿ. ಜ್ಯೋತಿಪ್ರಕಾಶ್ ಮಿರ್ಜಿ, ಐಪಿಎಸ್, ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಮೈಕೋ ಲೇಔಟ್ ಸಂಚಾರ ಪೊಲೀಸ್ ಠಾಣೆಯ ಬನ್ನೇರುಘಟ್ಟ ರಸ್ತೆಯಲ್ಲಿ ಈ ಕೆಳಕಂಡಂತೆ ಸಂಚಾರ ಮಾರ್ಪಾಡುಗಳನ್ನು ಮಾಡಿ ಜಾರಿಗೆ ತರಲು ಆದೇಶಿಸಿರುತ್ತೇನೆ.

**ಏಕಮುಖ ಸಂಚಾರ ವ್ಯವಸ್ಥೆ**

1. **ಬನ್ನೇರುಘಟ್ಟ ರಸ್ತೆ** :– ಬನ್ನೇರುಘಟ್ಟ ರಸ್ತೆಯಲ್ಲಿ ಸಾಗರ್ ಆಸ್ಪತ್ರೆ ಜಂಕ್ಷನ್‌ನಿಂದ ಹಳೇ ಗುರಪ್ಪನಪಾಳ್ಯ ಜಂಕ್ಷನ್‌ವರೆಗೆ ಇರುವ ದ್ವಿಮುಖ ಸಂಚಾರ ವ್ಯವಸ್ಥೆಯಲ್ಲಿ ಸಾಗರ್ ಆಸ್ಪತ್ರೆ ಜಂಕ್ಷನ್‌ನಿಂದ ಹಳೇ ಗುರಪ್ಪನಪಾಳ್ಯ ಜಂಕ್ಷನ್‌ವರೆಗೆ ಉತ್ತರದಿಂದ ದಕ್ಷಿಣಕ್ಕೆ ಸಾಗುವ ಸಂಚಾರವನ್ನು ಯಥಾಸ್ಥಿತಿಯಲ್ಲಿ ಉಳಿಸಿಕೊಂಡು ವಿರುದ್ಧ ದಿಕ್ಕಿನ ಸಂಚಾರವನ್ನು ಅಂದರೆ ಹಳೇ ಗುರಪ್ಪನಪಾಳ್ಯ ಜಂಕ್ಷನ್‌ನಿಂದ ಸಾಗರ್ ಆಸ್ಪತ್ರೆ ಜಂಕ್ಷನ್ ವರೆಗೆ ದಕ್ಷಿಣದಿಂದ ಉತ್ತರಕ್ಕೆ ಸಾಗುವ ಸಂಚಾರವನ್ನು ನಿಷೇಧಿಸಲಾಗಿದೆ.

2. **ಸ್ವಾಗತ್ ಮುಖ್ಯ ರಸ್ತೆ** :– ಸ್ವಾಗತ್ ಮುಖ್ಯ ರಸ್ತೆಯು ದ್ವಿಮುಖ ಸಂಚಾರ ವ್ಯವಸ್ಥೆಯಿಂದ ಕೂಡಿದ್ದು, ಈ ಸಂಚಾರ ವ್ಯವಸ್ಥೆಯಲ್ಲಿ ಸ್ವಾಗತ್ ಮುಖ್ಯ ರಸ್ತೆ – ಈಸ್ಟ್ ಎಂಡ್ ರಸ್ತೆ ಜಂಕ್ಷನ್‌ನಿಂದ ಬನ್ನೇರುಘಟ್ಟ ರಸ್ತೆಯ ಸಾಗರ್ ಆಸ್ಪತ್ರೆ ಜಂಕ್ಷನ್ ವರೆಗೆ ಪಶ್ಚಿಮದಿಂದ ಪೂರ್ವಕ್ಕೆ ಸಾಗುವ ಸಂಚಾರವನ್ನು ಯಥಾಸ್ಥಿತಿಯಲ್ಲಿ ಉಳಿಸಿಕೊಂಡು ವಿರುದ್ಧ ದಿಕ್ಕಿನ ಸಂಚಾರವನ್ನು ಅಂದರೆ ಸಾಗರ್ ಆಸ್ಪತ್ರೆ ಜಂಕ್ಷನ್‌ನಿಂದ ಸ್ವಾಗತ್ ಮುಖ್ಯ ರಸ್ತೆ – ಈಸ್ಟ್ ಎಂಡ್ ರಸ್ತೆ ಜಂಕ್ಷನ್‌ವರೆಗೆ ಪೂರ್ವದಿಂದ ಪಶ್ಚಿಮಕ್ಕೆ ಸ್ವಾಗತ್ ಮುಖ್ಯ ರಸ್ತೆಯಲ್ಲಿ ಸಾಗುವ ಸಂಚಾರವನ್ನು ನಿಷೇಧಿಸಲಾಗಿದೆ.

3. **ಜಲಭವನ್ ರಸ್ತೆ** : – ಜಲಭವನ್ ರಸ್ತೆಯು ಬನ್ನೇರುಘಟ್ಟ ರಸ್ತೆ ಮತ್ತು ಈಸ್ಟ್ ಎಂಡ್ ರಸ್ತೆಯನ್ನು ಸೇರಿಸುವ ರಸ್ತೆಯಾಗಿ ದ್ವಿಮುಖ ಸಂಚಾರ ವ್ಯವಸ್ಥೆಯಿಂದ ಕೂಡಿರುತ್ತದೆ. ಈ ರಸ್ತೆಯಲ್ಲಿ ಈಸ್ಟ್ ಎಂಡ್ ರಸ್ತೆಯಿಂದ ಬನ್ನೇರುಘಟ್ಟ ಮುಖ್ಯ ರಸ್ತೆಗೆ ಪಶ್ಚಿಮದಿಂದ ಪೂರ್ವಕ್ಕೆ ಸಾಗುವ ಸಂಚಾರವನ್ನು ಯಥಾಸ್ಥಿತಿಯಲ್ಲಿ ಉಳಿಸಿಕೊಂಡು ವಿರುದ್ಧ ದಿಕ್ಕಿನ ಸಂಚಾರವನ್ನು ಅಂದರೆ ಬನ್ನೇರುಘಟ್ಟ ಮುಖ್ಯ ರಸ್ತೆಯಿಂದ ಈಸ್ಟ್ ಎಂಡ್ ರಸ್ತೆ ಜಂಕ್ಷನ್‌ವರೆಗೆ ಪೂರ್ವದಿಂದ ಪಶ್ಚಿಮಕ್ಕೆ ಜಲಭವನ್ ರಸ್ತೆಯಲ್ಲಿ ಸಾಗುವ ಸಂಚಾರವನ್ನು ನಿಷೇಧಿಸಲಾಗಿದೆ.

4. **ರೆಡ್ಡಿ ಆಸ್ಪತ್ರೆ ರಸ್ತೆ:** ರೆಡ್ಡಿ ಆಸ್ಪತ್ರೆ ರಸ್ತೆಯು ಬನ್ನೇರುಘಟ್ಟ ರಸ್ತೆ – ಹಳೇ ಗುರಪ್ಪನಪಾಳ್ಯ ಮತ್ತು ಈಸ್ಟ್ ಎಂಡ್ ರಸ್ತೆಯನ್ನು ಸೇರಿಸುವ ರಸ್ತೆಯಾಗಿ ದ್ವಿಮುಖ ಸಂಚಾರ ವ್ಯವಸ್ಥೆಯಿಂದ ಕೂಡಿರುತ್ತದೆ. ಈ ರಸ್ತೆಯಲ್ಲಿ ಬನ್ನೇರುಘಟ್ಟ ರಸ್ತೆಯಿಂದ ಈಸ್ಟ್ ಎಂಡ್ ರಸ್ತೆ ಜಂಕ್ಷನ್‌ವರೆಗೆ

(ರೆಡ್ಡಿ ಆಸ್ಪತ್ರೆ ಜಂಕ್ಷನ್) ಪೂರ್ವದಿಂದ ಪಶ್ಚಿಮ ದಿಕ್ಕಿಗೆ ಸಾಗುವ ಸಂಚಾರವನ್ನು ಯಥಾಸ್ಥಿತಿಯಲ್ಲಿ ಉಳಿಸಿಕೊಂಡು ವಿರುದ್ಧ ದಿಕ್ಕಿನ ಸಂಚಾರವನ್ನು ಅಂದರೆ ಈಸ್ಟ್ ಎಂಡ್ ರಸ್ತೆ ಜಂಕ್ಷನ್ (ರೆಡ್ಡಿ ಆಸ್ಪತ್ರೆ ಜಂಕ್ಷನ್) ನಿಂದ ಬನ್ನೇರುಘಟ್ಟ ಮುಖ್ಯ ರಸ್ತೆವರೆಗೆ ಪಶ್ಚಿಮದಿಂದ ಪೂರ್ವಕ್ಕೆ ಈಸ್ಟ್ ಎಂಡ್ ರಸ್ತೆ ಜಂಕ್ಷನ್‌ನಿಂದ ಬನ್ನೇರುಘಟ್ಟ ಮುಖ್ಯ ರಸ್ತೆ ಹಳೇ ಗುರುಪ್ಪನಪಾಳ್ಯ ಜಂಕ್ಷನ್‌ವರೆಗೆ ರೆಡ್ಡಿ ಆಸ್ಪತ್ರೆ ರಸ್ತೆಯಲ್ಲಿ ಸಾಗುವ ಸಂಚಾರವನ್ನು ನಿಷೇಧಿಸಲಾಗಿದೆ.

**ಬಲ ತಿರುವು ನಿಷೇಧ**

1. ಬನ್ನೇರುಘಟ್ಟ ಮುಖ್ಯ ರಸ್ತೆಯಲ್ಲಿ ಉತ್ತರ ದಿಕ್ಕಿನ ಬೆಂಗಳೂರು ಡೈರಿ ವೃತ್ತದಿಂದ ಬಂದು ಸಾಗರ್ ಆಸ್ಪತ್ರೆ ಜಂಕ್ಷನ್‌ನಲ್ಲಿ ಸ್ವಾಗತ್ ಮುಖ್ಯ ರಸ್ತೆಗೆ (ಪಶ್ಚಿಮ ದಿಕ್ಕಿಗೆ) ಬಲ ತಿರುವು ಪಡೆಯುವುದನ್ನು ನಿಷೇಧಿಸಲಾಗಿದೆ. ಈ ವಾಹನಗಳು ಸಾಗರ್ ಆಸ್ಪತ್ರೆ ಜಂಕ್ಷನ್‌ನಿಂದ ಬನ್ನೇರುಘಟ್ಟ ಮುಖ್ಯ ರಸ್ತೆಯಲ್ಲಿ ಮುಂದುವರಿದು ಹಳೆ ಗುರಪ್ಪನಪಾಳ್ಯ ಜಂಕ್ಷನ್‌ನಲ್ಲಿ ಬಲ ತಿರುವು ಪಡೆದು ರೆಡ್ಡಿ ಆಸ್ಪತ್ರೆ ರಸ್ತೆಯಲ್ಲಿ ಸಂಚರಿಸಲು ಅನುವು ಮಾಡಿಕೊಡಲಾಗಿದೆ.
2. ಸ್ವಾಗತ್ ಮುಖ್ಯ ರಸ್ತೆಯಲ್ಲಿ ಪಶ್ಚಿಮ ದಿಕ್ಕಿನ ತಿಲಕನಗರ ಕಡೆಯಿಂದ ಬಂದು ಈಸ್ಟ್ ಎಂಡ್ ರಸ್ತೆಗೆ ಬಲ ತಿರುವು ಪಡೆಯುವುದನ್ನು ನಿಷೇಧಿಸಲಾಗಿದೆ. ಈ ವಾಹನಗಳು ಸ್ವಾಗತ್ ಮುಖ್ಯ ರಸ್ತೆಯಲ್ಲಿ ಮುಂದುವರಿದು ಸಾಗರ್ ಆಸ್ಪತ್ರೆ ಜಂಕ್ಷನ್‌ನಲ್ಲಿ ಬಲ ತಿರುವು ಪಡೆದು ಸಂಚರಿಸಲು ಅನುವು ಮಾಡಿಕೊಡಲಾಗಿದೆ.
3. ಬನ್ನೇರುಘಟ್ಟ ಮುಖ್ಯ ರಸ್ತೆಯಲ್ಲಿ ಕ್ರಾಸ್ ರಸ್ತೆಗಳಾದ ಹಳೇ ಗುರಪ್ಪನಪಾಳ್ಯ, ಯುಕೋ ಬ್ಯಾಂಕ್, 4 ಮತ್ತು 5ನೇ ಕ್ರಾಸ್ ಗುರಪ್ಪನಪಾಳ್ಯ, ನ್ಯೂ ಗುರಪ್ಪನಹಳ್ಳಿ ಪಾಳ್ಯ ಮತ್ತು ಬಿಸ್ಮಿಲ್ಲಾ ನಗರ ಈ ಕಡೆಯಿಂದ ಬಂದು ಬನ್ನೇರುಘಟ್ಟ ಮುಖ್ಯ ರಸ್ತೆಯಲ್ಲಿ ಸಾಗರ್ ಆಸ್ಪತ್ರೆ ಜಂಕ್ಷನ್ ಕಡೆಗೆ ಸಾಗಲು ಬಲ ತಿರುವು ಪಡೆಯುವುದನ್ನು ನಿಷೇಧಿಸಲಾಗಿದೆ.
4. ರೆಡ್ಡಿ ಆಸ್ಪತ್ರೆ ರಸ್ತೆ ದಕ್ಷಿಣ ಭಾಗದಲ್ಲಿರುವ ಈಸ್ಟ್ ಎಂಡ್ ಎ, ಬಿ, ಸಿ ಮತ್ತು ಡಿ ಮುಖ್ಯ ರಸ್ತೆಗಳಿಂದ ಬರುವ ವಾಹನಗಳು ರೆಡ್ಡಿ ಆಸ್ಪತ್ರೆ ರಸ್ತೆಗೆ ಬಲ ತಿರುವು ಪಡೆಯುವುದನ್ನು ನಿಷೇಧಿಸಲಾಗಿದೆ.

**ಎಡ ತಿರುವು ನಿಷೇಧ**

1. ಎನ್.ಎ.ಎಲ್ ಲೇಔಟ್ ಮತ್ತು ಜಲಭವನ ರಸ್ತೆಗಳ ಮೂಲಕ ಬಂದು ಬನ್ನೇರುಘಟ್ಟ ಮುಖ್ಯ ರಸ್ತೆಯಲ್ಲಿ ಸಾಗರ್ ಆಸ್ಪತ್ರೆ ಜಂಕ್ಷನ್ ಕಡೆಗೆ ಸಾಗಲು ಎಡ ತಿರುವು ಪಡೆಯುವುದನ್ನು ನಿಷೇಧಿಸಲಾಗಿದೆ.
2. ರೆಡ್ಡಿ ಆಸ್ಪತ್ರೆ ರಸ್ತೆ ಉತ್ತರ ಭಾಗದಲ್ಲಿರುವ ಈಸ್ಟ್ ಎಂಡ್ ಎ, ಬಿ, ಸಿ ಮತ್ತು ಡಿ ಮುಖ್ಯ ರಸ್ತೆಗಳಿಂದ ಬರುವ ವಾಹನಗಳು ರೆಡ್ಡಿ ಆಸ್ಪತ್ರೆ ರಸ್ತೆಗೆ ಎಡ ತಿರುವು ಪಡೆಯುವುದನ್ನು ನಿಷೇಧಿಸಲಾಗಿದೆ.

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಮೇಲ್ಕಂಡ ನಿರ್ಬಂಧನೆಯನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ: 16–06–2012ರಿಂದ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿವಸ ಅಂದರೆ ದಿನಾಂಕ: 02–06–2012ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಬಿ.ಜಿ. ಜ್ಯೋತಿಪ್ರಕಾಶ್ ಮಿರ್ಜಿ**

**ಪಿ.ಆರ್. 832** ಪೊಲೀಸ್ ಕಮೀಷನರ್, ಬೆಂಗಳೂರು ನಗರ.

## IN THE COURT OF HON'BLE 11TH ACMM COURT, MAYO HALL, BANGALORE

**SUB:-**Publish unclaimed vehicles in Karnataka Gezzette

With reference to the above subject, I here by directed to Publish the Uncliamed Twenty four Two wheeler and one car concerned to Devarajeevanahalli Police station in Karnataka Gezzette. The perticulers of the Vehicle are as following.

| SL.No | Vehicle Type | Vehicle Reg.Number | Eng.Number | Chasiss Number |
|---|---|---|---|---|
| 1 | Kawasaki Bajaj | CTO-3777 | 30EO12314. | 30CO12292 |
| 2 | Bajaj chetak | CKI-4986 | 06E622244, | 060585691, |

| SL.No | Vehicle Type | Vehicle Reg.Number | Eng.Number | Chasiss Number |
|---|---|---|---|---|
| 3 | Suzuki Feiro | KA.04.EB.4479 | Nil | Nil |
| 4 | Bajaj Pulsar | KA.03.EJ.8359 | DHGBKC17741. | DHVBKC17736, |
| 5 | T.V.S XL | KA.03.W.9041 | Nil | Nil |
| 6 | T.V.S XL | Nil | Nil | Nil |
| 7 | Lamleta | Nil | Nil | Nil |
| 8 | T.V.S XL | Nil | Nil | Nil |
| 9 | T.V.S XL | Nil | Nil | Nil |
| 10 | Hero Honda Passoian | KA-01-S-7195 | 02F21M22824 | .02F21C24190 |
| 11 | Hero Honda Splender | KA.05.E.509 | 95B17E00482. | 95B19F00435. |
| 12 | Honda Unicorn | KA-04-EV-1576 | KC09E9005048 | ME4KC092K58005022 |
| 13 | Suzuki Feiro | KA-04-EA-5457 | MH08M093579 | M1108F092134 |
| 14 | Maruti ZEN | KA-05-Z-5479 | GCOBBN152675 | MA3EYD35300588715 |
| 15 | Hero Honda CD-100 | KA-34-E-2802 | 94M10E00529 | Nil |
| 16 | Honda Unicorn | KA-02-TR-360 | KCO9E0070897 | ME4KCO94E58070832 |
| 17 | Kinetic Activa K2K | KA-01-H-2235 | Nil | Nil |
| 18 | Kinetic Activa | KA-05-ED-9986 | Nil | Nil |
| 19 | BAJAJ CALIBER | KA-02-EB-2989 | DDMBGD83129 | DOFBGO22409 |
| 20 | Honda Activa | KA-02-E-2317 | JFO8E-0720129 | ME4JFO 95858702037 |
| 21 | Kinetic Honda | CAZ – 4199 | E-078116 | E-076527 |
| 22 | TVS Scooty | KA-16-F-7988 | Nil | K96EF053407 |
| 23 | K-Bajaj | KA-03-K-8972 | 31M93K18066 | 31F93L18894 |
| 24 | Hero Honda CD-100 | CTO-6907 | C10E127059 | NIL |
| 25 | Hero PUCH shakti, | KA-09-Q-7956 | EB522474 | MD397C1BRVC518323 |

**Note:** every this is checked as per circular and with PF's found correct.

11th Add. Chief Metropolitan Magistrate
Bangalore City

**PR-838**

## ಕಾರ್ಮಿಕ ಇಲಾಖೆ

### ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕರ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ.

**ಪ್ರ.ಸಂ:ಕಾಅದಾ/ಕಾನಪ/ಸಿ.ಆರ್–38/2012 ದಿನಾಂಕ:16–6–2012**

**ಅರ್ಜಿದಾರರು**

1. ಶ್ರೀಮತಿ ಪರ್ಹನಾ ಬಾನು ಗಂಡ ಲೇಟ್ ಅಪ್‌ಜಲ್ ಪಾಷ
2. ಷಾಜೀಯಾ ತಂದೆ ಲೇಟ್ ಅಪ್‌ಜಲ್ ಪಾಷ
3. ಅರೀಬ್ ಅಪ್‌ಜಲ್ ತಂದೆ ಲೇಟ್ ಅಪ್‌ಜಲ್ ಪಾಷ
4. ಅಯೀಷಾ ಸಿದ್ದೀಕ್ ತಂದೆ ಲೇಟ್ ಅಪ್‌ಜಲ್ ಪಾಷ
5. ಮಮತಾಜ್ ಬೇಗಂ ಗಂಡ ಪ್ಯಾರೀಜಾನ್
6. ಪ್ಯಾರೀಜಾನ್ ತಂದೆ ಲೇಟ್ ಅಬ್ದುಲ್ ರಹೀಮ್

ವಿಳಾಸ:–ಮುಸ್ಲಿಂ ಕಾಲೊನಿ, ತಾಲ್ಲೂಕ್ ಆಫೀಸ್ ರಸ್ತೆ, ಜಗಳೂರು

**ಪ್ರತಿವಾದಿಗಳು**

1. ಜಿ ಟಿ ವಿಜಯಕುಮಾರ್
ತಂದೆ ಲೇಟ್ ಜಿ ತಿಮ್ಮಣ್ಣ
ಟ್ರಾನ್ಸ್‌ಪೋರ್ಟ ಬಿಸ್‌ನೇಸ್ ಚಿಕ್ಕಗೊಂಡನಹಳ್ಳಿ
ಚಿತ್ರದುರ್ಗ (ತಾ) ಪ್ರವೇಟ್ ಬಸ್ಸ್ ನಂ ಕೆ ಎ 16/ಎ/5425.

2 ದಿ ಡಿವಿಜನಲ್ ಮ್ಯಾನೇಜರ್
ದಿ ನ್ಯೂ ಇಂಡಿಯನ್ ಅಶ್ಯೂರೆನ್ಸ್ ಕಂಪನಿ ಲಿ,
ಡಿವಿಜನಲ್ ಆಫೀಸ್,ಸಿ.ಜಿ ಆಸ್ಪತ್ರೆ ರಸ್ತೆ, ದಾವಣಗೆರೆ

**ಪ್ರಕಟಣೆ**

ಶ್ರೀ:ಶ್ರೀಮತಿ ಪರ್ಹನಾ ಬಾನು ಗಂಡ ಲೇಟ್ ಅಪ್‌ಜಲ್ ಪಾಷ, ಷಾಜೀಯಾ ತಂದೆ ಲೇಟ್ ಅಪ್‌ಜಲ್ ಪಾಷ, ಅರೀಬ್ ಅಪ್‌ಜಲ್ ತಂದೆ ಲೇಟ್ ಅಪ್‌ಜಲ್ ಪಾಷ, ಅಯೀಷಾ ಸಿದ್ದೀಕ್ ತಂದೆ ಲೇಟ್ ಅಪ್‌ಜಲ್ ಪಾಷ, ಮಮತಾಜ್ ಬೇಗಂ ಗಂಡ ಪ್ಯಾರೀಜಾನ್, ಪ್ಯಾರೀಜಾನ್ ತಂದೆ ಲೇಟ್ ಅಬ್ದುಲ್ ರಹೀಮ್ ಇವರುಗಳಾದ ನಾವು ಮೃತ ಅಪ್‌ಜಲ್ ಪಾಷ ಇವರ ಹೆಂಡತಿ, ಮಕ್ಕಳು ಹಾಗೂ ತಂದೆ–ತಾಯಿ ಎಂದೂ ನಾವು ಮೃತ ಅಪ್‌ಜಲ್ ಪಾಷ ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ, ಮೃತ ಅಪ್‌ಜಲ್ ಪಾಷ ಒಂದನೇ ಪ್ರತಿವಾದಿಗಳಾದ ಜಿ ಟಿ ವಿಜಯಕುಮಾರ್ ತಂದೆ ಲೇಟ್ ಜಿ ತಿಮ್ಮಣ್ಣರವರಲ್ಲಿ ಚಾಲಕ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿರುವುದಾಗಿ ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದೇನೆಂದರೆ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್.ಹಿರೇಗೌಡರ್,**
ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು
ಕಾರ್ಮಿಕ ನಷ್ಠ ಪರಿಹಾರ ದಾವಣಗೆರೆ ಜಿಲ್ಲೆ, ದಾವಣಗೆರೆ

**ಪಿ.ಆರ್. 840**

## ಕಾರ್ಮಿಕ ಇಲಾಖೆ

### ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕರ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ.

**ಪ್ರ.ಸಂ:ಕಾಅದಾ/ಕಾನಪ/ಸಿ.ಆರ್–46/2012 ದಿನಾಂಕ:16–6–2012**

**ಅರ್ಜಿದಾರರು**

1. ಶ್ರೀಮತಿ ಶಾರದಮ್ಮ ಗಂಡ ಲೇಟ್ ಟಿ ಕೆಂಚಪ್ಪ 38 ವರ್ಷಗಳು
2. ಟಿ. ಕೆ. ಹರೀಶ್ ತಂದೆ ಲೇಟ್ ಕೆಂಚಪ್ಪ ವಯಸ್ಸು 18 ವರ್ಷ
3. ಟಿ. ಕೆ. ರಾಕೇಶ್ ತಂದೆ ಲೇಟ್ ಕೆಂಚಪ್ಪ ವಯಸ್ಸು 12 ವರ್ಷ

ವಿಳಾಸ:–ಜರೀಕಟ್ಟೆ ಗ್ರಾಮ, ದಾವಣಗೆರೆ (ತಾ) ದಾವಣಗೆರೆ ಜಿಲ್ಲೆ.

**ಪ್ರತಿವಾದಿಗಳು**

1. ಶ್ರೀ ಎಂ.ಕೆ. ರವಿಕುಮಾರ್
ತಂದೆ ಎಂ ಕೆಂಚಪ್ಪ ಟ್ರಾಕ್ಟರ್ ಓನರ್
ನಂ ಕೆ ಎ 17– ಟಿ.ಬಿ. 1555
2. ಶ್ರೀ ಎಂ ನಾಗಪ್ಪ ತಂದೆ ಬಸಪ್ಪ
ಟ್ರೈಲರ್ ಓನರ್, ನಂ ಕೆ ಎ 17–ಟಿ. 3711
3. ದಿ ಬ್ರಾಂಚ್ ಮ್ಯಾನೇಜರ್ ಇಫ್ಕೋ ಟೋಕಿಯಾ ಜನರಲ್
ಇನ್ಸೂರೇನ್ಸ್ ಕಂ,ಲಿ, ಹರಿಯಾಣ

**:: ಪ್ರಕಟಣೆ ::**

ಶ್ರೀ:ಶ್ರೀಮತಿ ಶಾರದಮ್ಮ ಗಂಡ ಲೇಟ್ ಟಿ ಕೆಂಚಪ್ಪ, ಟಿ. ಕೆ. ಹರೀಶ್ ತಂದೆ ಲೇಟ್ ಕೆಂಚಪ್ಪ ಮತ್ತು ಟಿ. ಕೆ. ರಾಕೇಶ್ ತಂದೆ ಲೇಟ್ ಕೆಂಚಪ್ಪ ಇವರುಗಳಾದ ನಾವು ಮೃತ ಅಪ್‌ಜಲ್ ಪಾಷ ಇವರ ಹೆಂಡತಿ, ಮಕ್ಕಳು ಹಾಗೂ ತಂದೆ–ತಾಯಿ ಎಂದೂ ನಾವು ಮೃತ ಅಪ್‌ಜಲ್ ಪಾಷ ಅವರ

ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ, ಮೃತ ಕೆಂಚಪ್ಪ ಒಂದನೇ ಪ್ರತಿವಾದಿಗಳಾದ ಎಂ.ಕೆ. ರವಿಕುಮಾರ್‌ರವರಲ್ಲಿ ಹಮಾಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿರುವುದಾಗಿ ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದೇನೆಂದರೆ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್.ಹಿರೇಗೌಡರ್,**
ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು
ಕಾರ್ಮಿಕ ನಷ್ಠ ಪರಿಹಾರ ದಾವಣಗೆರೆ ಜಿಲ್ಲೆ, ದಾವಣಗೆರೆ

**ಪಿ.ಆರ್. 841**

## ಕಾರ್ಮಿಕ ಇಲಾಖೆ

### ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕರ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ.

**ಪ್ರ.ಸಂ:ಕಾಅದಾ/ಕಾನಪ/ಸಿ.ಆರ್–49/2012 ದಿನಾಂಕ:16–6–2012**

**ಅರ್ಜಿದಾರರು**

ಶ್ರೀಮತಿ ಶಾಂತಮ್ಮ
ಗಂಡ ಲೇಟ್ ಬಸವರಾಜಪ್ಪ 50 ವರ್ಷ ಸುರಹೊನ್ನೆ
ಹೊನ್ನಳ್ಳಿ (ತಾ) ದಾವಣಗೆರೆ (ಡಿ)

**ಪ್ರತಿವಾದಿಗಳು**

1. ಶ್ರೀ ಬಿ ಶಿವಪ್ಪ ತಂದೆ ತಿಮ್ಮಪ್ಪ
   ಟ್ರಾಕ್ಟರ್ ಮತ್ತು ಟ್ರೈಲರ್ ಮಾಲೀಕರು,
   ನಂ ಕೆ ಎ 14/ಟಿ–3687–88 ಸುರಹೊನ್ನೆ, ಹೊನ್ನಳ್ಳಿ (ತಾ) ದಾವಣಗೆರೆ (ಡಿ)
2. ದಿ ಡಿವಿಜನ್ ಅಫೀಸರ್,
   ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂಪನಿ ಲಿ, ಶಿವಮೊಗ್ಗ

**:: ಪ್ರಕಟಣೆ ::**

ಶ್ರೀ:ಶ್ರೀಮತಿ ಶಾಂತಮ್ಮ ಗಂಡ ಲೇಟ್ ಬಸವರಾಜಪ್ಪ ಇವರುಗಳಾದ ನಾವು ಮೃತ ಬಸವರಾಜಪ್ಪ ಇವರ ಹೆಂಡತಿ, ಎಂದೂ ನಾವು ಮೃತ ಬಸವರಾಜಪ್ಪ ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ, ಮೃತ ಬಸವರಾಜಪ್ಪ ಒಂದನೇ ಪ್ರತಿವಾದಿಗಳಾದ ಬಿ ಶಿವಪ್ಪ ತಂದೆ ತಿಮ್ಮಪ್ಪರವರಲ್ಲಿ ಕೂಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿರುವುದಾಗಿ ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದೇನೆಂದರೆ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್.ಹಿರೇಗೌಡರ್,**
ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು
ಕಾರ್ಮಿಕ ನಷ್ಠ ಪರಿಹಾರ ದಾವಣಗೆರೆ ಜಿಲ್ಲೆ, ದಾವಣಗೆರೆ

**ಪಿ.ಆರ್. 842**

## ಕಾರ್ಮಿಕ ಇಲಾಖೆ

### ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕರ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ.

**ಪ್ರ.ಸಂ:ಕಾಅದಾ/ಕಾನಪ/ಸಿ.ಆರ್–39/2012 ದಿನಾಂಕ:16–6–2012**

**ಅರ್ಜಿದಾರರು**

1. ಶ್ರೀಮತಿ ಲಲಿತಮ್ಮ ಕೋಂ ಲೇಟ್ ಬಿ.ನಾಗರಾಜಪ್ಪ 37 ವರ್ಷ
2. ಬಿ.ಎನ್.ಕಾರ್ತಿಕ್‌ರಾಜ್
   ಬಿನ್ ಲೇಟ್ ಬಿ.ನಾಗರಾಜಪ್ಪ 11 ವರ್ಷ
3. ಬಿ.ಎನ್.ಮೇಘರಾಜ್ @ ಬಿ.ಎನ್.ಮಲ್ಲಿಕಾರ್ಜುನ
   ಬಿನ್ ಲೇಟ್ ಬಿ.ನಾಗರಾಜಪ್ಪ 08 ವರ್ಷ

ವಿಳಾಸ:–ನ್ಯಾಮತಿ, ಕೆ.ಇ.ಬಿ. ಬಡಾವಣೆ,
ಹೊನ್ನಳ್ಳಿ (ತಾ) ದಾವಣಗೆರೆ (ಡಿ)

**ಪ್ರತಿವಾದಿಗಳು**

1. ಸಹಾಯಕ ಕಾರ್ಯನಿರ್ವಾಹಕ ಇಂಜಿನಿಯರ್(ವಿ) ಕಛೇರಿ,
   ವಾಣಿಜ್ಯ ಕಾರ್ಯ & ಪಾಲನೆ ವಿಭಾಗ, ಬೆಸ್ಕಾಂ, ಹೊನ್ನಾಳಿ.
2. ಕಾರ್ಯ ನಿರ್ವಾಹಕ ಇಂಜಿನಿಯರ್ (ವಿ)
   ವಾಣಿಜ್ಯ ಕಾರ್ಯ & ಪಾಲನೆ ವಿಭಾಗ, ಬೆಸ್ಕಾಂ,
   ಹರಿಹರ.
3. ಅಧೀಕ್ಷಕ ಇಂಜಿನಿಯರ್ (ವಿ)
   ವಾಣಿಜ್ಯ ಕಾರ್ಯ & ಪಾಲನಾ ವೃತ್ತ, ಬೆ.ವಿ.ಕಂ.
   ಹದಡಿ ರಸ್ತೆ, ದಾವಣಗೆರೆ.

**:: ಪ್ರಕಟಣೆ ::**

ಶ್ರೀ:ಶ್ರೀಮತಿ ಲಲಿತಮ್ಮ ಕೋಂ ಲೇಟ್ ಬಿ.ನಾಗರಾಜಪ್ಪ, ಬಿ.ಎನ್.ಕಾರ್ತಿಕ್‌ರಾಜ್ ಬಿನ್ ಲೇಟ್ ಬಿ.ನಾಗರಾಜಪ್ಪ, ಮತ್ತು ಬಿ.ಎನ್.ಮೇಘರಾಜ್ @ ಬಿ.ಎನ್.ಮಲ್ಲಿಕಾರ್ಜುನ ಬಿನ್ ಲೇಟ್ ಬಿ.ನಾಗರಾಜಪ್ಪ ಇವರುಗಳಾದ ನಾವು ಮೃತ ಬಿ.ನಾಗರಾಜಪ್ಪ, ಇವರ ಹೆಂಡತಿ, ಮಕ್ಕಳು ಎಂದೂ ನಾವು ಮೃತ ಬಿ.ನಾಗರಾಜಪ್ಪ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ, ಮೃತ ಬಿ.ನಾಗರಾಜಪ್ಪ ಪ್ರತಿವಾದಿಯವರಲ್ಲಿ ಮೀಟರ್ ರೀಡರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿರುವುದಾಗಿ ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದೇನೆಂದರೆ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್.ಹಿರೇಗೌಡರ್,**
ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು
ಕಾರ್ಮಿಕ ನಷ್ಟ ಪರಿಹಾರ ದಾವಣಗೆರೆ ಜಿಲ್ಲೆ, ದಾವಣಗೆರೆ

**ಪಿ.ಆರ್. 856**

## ಕಾರ್ಮಿಕ ಇಲಾಖೆ

### ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕರ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ

**ಪ್ರ.ಸಂ:ಕಾಅದಾ/ಕಾನಪ/ಸಿ.ಆರ್–44/2012 ದಿನಾಂಕ:16–6–2012**

**ಅರ್ಜಿದಾರರು**

1. ಶ್ರೀಮತಿ ಜಯಮ್ಮ ಗಂಡ ಲೇಟ್ ರುದ್ರಪ್ಪ, 33 ವರ್ಷ
2. ಕರಿಯಮ್ಮ, 13 ವರ್ಷ
3. ರಂಗಸ್ವಾಮಿ, 11 ವರ್ಷ
4. ಅಣ್ಣಪ್ಪ, 10 ವರ್ಷ
5. ತಿಪ್ಪಮ್ಮ ಕೋಂ ಲೇಟ್ ರಂಗಪ್ಪ

ವಿಳಾಸ:– ಸಿಂಗಟಗೇರೆ ಗ್ರಾಮ,
ಹೊನ್ನಳ್ಳಿ (ತಾ) ದಾವಣಗೆರೆ (ಡಿ)

**ಪ್ರತಿವಾದಿಗಳು**

1. ಮಹೇಶ್ವರಪ್ಪ ಬಿನ್ ದೊಡ್ಡ ಬಸಪ್ಪ
ಟ್ರಾಕ್ಟರ್ ಮತ್ತು ಟ್ರೈಲರ್ ಓನರ್
ನಂ ಕೆ ಎ 17–ಟಿ.9948–9949
ತರಗನಹಳ್ಳಿ ಗ್ರಾಮ,
ಹೊನ್ನಳ್ಳಿ (ತಾ) ದಾವಣಗೆರೆ (ಡಿ)

2. ದಿ ಮ್ಯಾನೇಜರ್
ಚೋಳಮಂಡಲಂ ಎಂ.ಎಸ್. ಜನರಲ್ ಇನ್ಸೂರೆನ್ಸ್
ಕಂಪನಿ ಲಿಂ
ದೇಶಪಾಂಡೆ ನಗರ, ಹುಬ್ಬಳ್ಳಿ

**ಪ್ರಕಟಣೆ**

ಶ್ರೀ:ಶ್ರೀಮತಿ ಜಯಮ್ಮ ಗಂಡ ಲೇಟ್ ರುದ್ರಪ್ಪ, ಕರಿಯಮ್ಮ, ರಂಗಸ್ವಾಮಿ, ಅಣ್ಣಪ್ಪ, ತಿಪ್ಪಮ್ಮ ಕೋಂ ಲೇಟ್ ರಂಗಪ್ಪ, ಇವರುಗಳಾದ ನಾವು ಮೃತ ರುದ್ರಪ್ಪ ಇವರ ಹೆಂಡತಿ, ಮಕ್ಕಳು ಹಾಗೂ ತಾಯಿ ಎಂದೂ ನಾವು ಮೃತ ರುದ್ರಪ್ಪ ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ, ಮೃತ ರುದ್ರಪ್ಪ ಒಂದನೇ ಪ್ರತಿವಾದಿಗಳಾದ ಮಹೇಶ್ವರಪ್ಪ ಬನ್ ದೊಡ್ಡ ಬಸಪ್ಪರವರಲ್ಲಿ ಕೂಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿರುವುದಾಗಿ ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದೇನೆಂದರೆ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್.ಹಿರೇಗೌಡರ್,**
ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು
ಕಾರ್ಮಿಕ ನಷ್ಟ ಪರಿಹಾರ ದಾವಣಗೆರೆ ಜಿಲ್ಲೆ, ದಾವಣಗೆರೆ

**ಪಿ.ಆರ್. 839**

**ಪ್ರಾಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ ಇವರ ನ್ಯಾಯಾಲಯದಲ್ಲಿ**

**ಪ್ರಕರಣ ಸಂ: ಇಎಕ್ಸ್‌ಇ/ಚಿಪುರ/ಡಿಟಿಸಿಆರ್/349/2011–12, ದಿನಾಂಕ: 08/06/2012**

**ಉಪಸ್ಥಿತರು:– ಎನ್. ಚಂದ್ರಶೇಖರ, ಪ್ರಾಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಚಿಕ್ಕಬಳ್ಳಾಪುರ ಜಿಲ್ಲೆ.**

| **ಪಿರ್ಯಾದುದಾರರು:–** | **–ವಿರುದ್ಧ–** | **ಆರೋಪಿ:–** |
|---|---|---|
| ಅಬಕಾರಿ ನಿರೀಕ್ಷಕರು,<br>ಚಿಕ್ಕಬಳ್ಳಾಪುರ ಉಪ ವಿಭಾಗ, ಚಿಕ್ಕಬಳ್ಳಾಪುರ. | | ನಾಗರಾಜ ವೈ.ಎನ್. ಬಿನ್ ನಾರಾಯಣಪ್ಪ,<br>ಎಲ್ಲೋಡು ಗ್ರಾಮ, ಗುಡಿಬಂಡೆ ತಾಲ್ಲೂಕು, ಚಿಕ್ಕಬಳ್ಳಾಪುರ ಜಿಲ್ಲೆ. |

**ಪ್ರಕರಣದ ಮುಖ್ಯಾಂಶಗಳು:–**

ಅಬಕಾರಿ ಉಪ ಅಧೀಕ್ಷಕರು, ಚಿಕ್ಕಬಳ್ಳಾಪುರ ಉಪ ವಿಭಾಗ ರವರ ಮಾರ್ಗದರ್ಶನದಂತೆ ದಿನಾಂಕ:16/02/2012 ರಂದು ಇದೇ ಉಪ ವಿಭಾಗದ ಅಬಕಾರಿ ನಿರೀಕ್ಷಕರು ಮತ್ತು ಸಿಬ್ಬಂದಿ ಇವರುಗಳು ಜಿ. ಕೊತ್ತೂರು ಮಾರ್ಗದಲ್ಲಿ ರಸ್ತೆ ಗಸ್ತು ಮಾಡುತ್ತಿದ್ದಾಗ ಬಂದ ಖಚಿತ ಬಾತ್ಮೀಯ ಮೇರೆಗೆ ಜಿ. ಕೊತ್ತೂರು ಬಸ್ ನಿಲ್ದಾಣದ ಹತ್ತಿರ ಇದ್ದ ಇಬ್ಬರು ವ್ಯಕ್ತಿಗಳಿಗೆ ವಿಷಯವನ್ನು ತಿಳಿಸಿ ಅವರುಗಳು ಪಂಚರಾಗಲು ಒಪ್ಪಿಕೊಂಡ ನಂತರ ಸರ್ಕಾರಿ ವಾಹನ ನೊಂದಣಿ ಸಂ:ಕೆಎ–01 ಜಿ–3642 ರ ವಾಹನದಲ್ಲಿ ಜಿ. ಕೊತ್ತೂರು–ಎಲ್ಲೋಡು ಮಾರ್ಗದಲ್ಲಿ ರಸ್ತೆಕಾವಲು ಮಾಡುತ್ತಿರುವಾಗ ಎಲ್ಲೋಡು ಕಡೆಯಿಂದ ಒಂದು ದ್ವಿಚಕ್ರ ವಾಹನ ಬರುತ್ತಿರುವುದು ಕಂಡು ಬಂದಿತು. ಸರ್ಕಾರಿ ವಾಹನವನ್ನು ನೋಡಿದ ದ್ವಿಚಕ್ರ ಸವಾರನು ಗಾಬರಿಗೊಂಡು ಚೋಳಶೆಟ್ಟಿಹಳ್ಳಿ ಕ್ರಾಸ್ ಕಡೆಗೆ ತನ್ನ ವಾಹನವನ್ನು ತಿರುಗಿಸಿಕೊಂಡನು. ಇದನ್ನು ಕಂಡ ಇಲಾಖಾ ಸಿಬ್ಬಂದಿಯು ಸರ್ಕಾರಿ ವಾಹನದಲ್ಲಿ ವೇಗವಾಗಿ ಸದರಿ ದ್ವಿಚಕ್ರ ವಾಹನವನ್ನು ಹಿಂಬಾಲಿಸಿ ತಡೆದು ನಿಲ್ಲಿಸಿ, ಆತನಿಗೆ ದ್ವಿಚಕ್ರ ವಾಹನವನ್ನು ತಪಾಸಣೆ ಮಾಡಬೇಕಾಗಿದೆ ಎಂದು ತಿಳಿಸಿ ಕಾಲಾವಕಾಶದ ತೊಂದರೆಯಿಂದ ಸರ್ಚ್ ವಾರೆಂಟ್‌ನ್ನು ಮಾನ್ಯ ನ್ಯಾಯಲಯದಿಂದ ಪಡೆಯಲು ಸಾಧ್ಯವಿಲ್ಲವಿಲ್ಲದ ಕಾರಣ, ಸ್ಥಳದಲ್ಲಿಯೇ ರೆಕಾರ್ಡ್ ಆಫ್ ರೀಸನ್ ಕ್ರಮದೊಂದಿಗೆ ವಾಹನದಲ್ಲಿದ್ದ ವಾಹನವನ್ನು ಪರಿಶೀಲಿಸಿದಾಗ ವಾಹನದಲ್ಲಿ ದಪ್ಪನೆಯ ಒಂದು ಪ್ಲಾಸ್ಟಿಕ್ ಕವರ್ ಇದ್ದು, ಅದನ್ನು ಬಿಚ್ಚಿ ನೋಡಿದಾಗ ಅದರಿಂದ ಘಾಟು ಮಿಶ್ರಿತ ಹುಳಿ ವಾಸನೆ ಬರುತ್ತಿದ್ದ ದ್ರಾವಣ ಇರುವುದು ಕಂಡು ಬಂದಿತು. ಸದರಿ ಆಸಾಮಿಗೆ ಅದು ಏನು ಎಂದು ಕೇಳಿದಾಗ ಸೇಂದಿ ಎಂದು ತಿಳಿಸಿದನು. ಸದರಿ ಮಾಲನ್ನು ಎಲ್ಲಿಂದ, ಏತಕ್ಕಾಗಿ ತಂದಿರುವೆ ಎಂದು ಆಸಾಮಿಯನ್ನು ಕೇಳಿದಾಗ ಆತನು ಆಂಧ್ರಪ್ರದೇಶದಿಂದ ತೆಗೆದುಕೊಂಡು ಬಂದಿದ್ದು, ಸೇಂದಿಯನ್ನು ಇಲ್ಲಿ ಮಾರಾಟ ಮಾಡಲು ತಂದಿರುವುದಾಗಿ ತಿಳಿಸಿರುತ್ತಾನೆ. ನಂತರ ಆತನ ಹೆಸರು ಮತ್ತು ವಿಳಾಸ ಕೇಳಲಾಗಿ ನಾಗರಾಜ ವೈ.ಎನ್. ಬಿನ್ ನಾರಾಯಣಪ್ಪ, ಎಲ್ಲೋಡು ಗ್ರಾಮ, ಗುಡಿಬಂಡೆ ತಾಲ್ಲೂಕು ಎಂದು ತಿಳಿಸಿದನು. ನಂತರ ಸೇಂದಿಯನ್ನು ಪರಿಶೀಲಿಸಿದಾಗ ದಪ್ಪನೆಯ ಒಂದು ಪ್ಲಾಸ್ಟಿಕ್ ಕವರ್‌ನಲ್ಲಿ ಎರಡು ಪ್ಲಾಸ್ಟಿಕ್ ಕವರ್‌ಗಳಲ್ಲಿ ಸೇಂದಿ ಇದ್ದು, ಒಂದರಲ್ಲಿ ಸುಮಾರು 6 ಲೀಟರ್ ಮತ್ತು ಇನ್ನೊಂದು ಕವರ್‌ನಲ್ಲಿ ಸುಮಾರು 2 ಲೀಟರ್ ಸೇಂದಿ ಇದ್ದು, ಒಟ್ಟು 8 ಲೀಟರ್ ಸೇಂದಿ ಇರುತ್ತದೆ. ತಲಾ ಒಂದೊಂದು ಕವರ್‌ನಿಂದ 1 ಲೀಟರ್ ಬಾಟಲುಗಳಲ್ಲಿ ಒಂದೊಂದು ಲೀಟರ್ ಸೇಂದಿಯನ್ನು ರಸಾಯನಿಕ ಪರೀಕ್ಷೆಗಾಗಿ ಸ್ಯಾಂಪಲ್ ತೆಗೆದು ಅವುಗಳಿಗೆ ಮುಚ್ಚಳ ಹಾಕಿ ಬಿಳಿ ಬಟ್ಟೆಯಿಂದ ಸುತ್ತಿ ದಾರದಿಂದ ಕಟ್ಟಿ ಇಲಾಖಾ ಸೀಲು ಸಂ:44 ರಿಂದ ಅರಗಿನ ಸೀಲು ಮಾಡಲಾಯಿತು. ಎರಡು ಸ್ಯಾಂಪಲ್ ಚೀಟಿಗಳ ಮೇಲೆ ವಿವರ ಬರೆದು ಅದಕ್ಕೆ ಪಂಚರ ಹಾಗೂ ಇಲಾಖಾಧಿಕಾರಿಗಳ ಸಹಿ ಪಡೆದು ಬಾಟಲುಗಳಿಗೆ ಅಂಟಿಸಿ ನಂತರ ದ್ವಿಚಕ್ರ ವಾಹನ ಟಿವಿಎಸ್ ಸ್ಪೋರ್ಟ್+ ನೊಂದಣಿ ಸಂ:ಕೆಎ–01 ಇಯು–6119 ಎಂದು ನಮೂದಿಸಿರುತ್ತದೆ. ನಂತರ ಸದರಿ ಆಸಾಮಿಯನ್ನು ದ್ವಿಚಕ್ರ ವಾಹನ ಮತ್ತು ಸೇಂದಿಯನ್ನು ಅಮಾನತ್ತುಪಡಿಸಿಕೊಂಡು ಈ ಕೃತ್ಯವು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 11 ರ ಪ್ರಕಾರ ಅಪರಾಧವಾಗಿದ್ದು,ಹಾಗೂ ಇದೇ ಕಾಯ್ದೆ ಕಲಂ 32 & 38(ಎ) ರಂತೆ ಶಿಕ್ಷಾರ್ಹವಾಗಿರುವುದರಿಂದ ಈ ಬಗ್ಗೆ ತಕ್ಷೀರು ಸಂ:36/2011–12, ದಿನಾಂಕ:16/02/2012 ರಲ್ಲಿ ಮೊಕದ್ದಮೆ ದಾಖಲಿಸಿಕೊಂಡು ಪ್ರಥಮ ಮಾಹಿತಿ ವರದಿಯೊಂದಿಗೆ ಆರೋಪಿಯನ್ನು ನ್ಯಾಯಾಲಯಕ್ಕೆ ಹಾಜರುಪಡಿಸಿ, ತದನಂತರ ಪ್ರ.ಮಾ.ವ. ಮಹಜರ್ ಪ್ರತಿಯೊಂದಿಗೆ ಹಾಗೂ ಪಿ.ಎಫ್‌ನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿ ಸೇಂದಿ ಮತ್ತು ವಾಹನವನ್ನು ಅಬಕಾರಿ ನಿರೀಕ್ಷಕರು, ಗೌರಿಬಿದನೂರು ವಲಯ ಇವರಿಗೆ ಹಸ್ತಾಂತರಿಸಲು ಅನುಮತಿ ನೀಡಬೇಕೆಂದು ಕೋರಿರುತ್ತಾರೆ.

ಅದರಂತೆ ಸೇಂದಿ ಮತ್ತು ವಾಹನವನ್ನು ಅಬಕಾರಿ ನಿರೀಕ್ಷಕರು, ಗೌರಿಬಿದನೂರು ವಲಯ ಇವರಿಗೆ ಹಸ್ತಾಂತರ ಮಾಡಲು ಈ ಪ್ರಾಧಿಕಾರದಿಂದ ದಿನಾಂಕ:17/02/2012 ರಂದು ಅನುಮತಿ ನೀಡಲಾಗಿರುತ್ತದೆ.

ಅಬಕಾರಿ ನಿರೀಕ್ಷಕರು, ಗೌರಿಬಿದನೂರು ವಲಯ ರವರು ತನಿಖೆಯನ್ನು ಮುಂದುವರೆಸಿ ಜಪ್ತುಪಡಿಸಿದ ಸೇಂದಿಯಿಂದ ತೆಗೆಯಲಾದ ಮಾದರಿಯನ್ನು ರಾಸಾಯನಿಕ ವಿಶ್ಲೇಷಣೆಗಾಗಿ ಕೇಂದ್ರ ರಾಸಾಯನಿಕ ಪ್ರಯೋಗಾಲಯ, ಅಬಕಾರಿ ಇಲಾಖೆ, ಬೆಂಗಳೂರು ಇವರಿಗೆ ಸಲ್ಲಿಸಿದ್ದು, ತಜ್ಞರ ವರದಿ ಸಂ:ಸಿಸಿಎಲ್:1492/2012, ದಿನಾಂಕ:12/03/2012 ರ ಪತ್ರದಂತೆ ರಾಸಾಯನಿಕ ವಿಶ್ಲೇಷಣೆಗೆ ಕಳುಹಿಸಲಾದ ಮಾದರಿಯಲ್ಲಿ ಮದ್ಯಸಾರದ ಅಂಶ 3.13 & 3.20% ವಿ.ವಿ. ಇದ್ದು, ಮಾದರಿ ಬಾಟಲಿಗಳಲ್ಲಿ ಈಥೈಲ್ ಅಲ್ಕೋಹಾಲ್ ಕಂಡುಬಂದಿದ್ದು, ಅವು ಮಾನವನ ಸೇವನೆಗೆ ಯೋಗ್ಯವಾಗಿರುತ್ತವೆ, ಎಂದು ತಜ್ಞರು ಅಭಿಪ್ರಾಯ ನೀಡಿದ್ದು, ತಜ್ಞರ ವರದಿಯ ಪ್ರತಿಯನ್ನು ಅಬಕಾರಿ ನಿರೀಕ್ಷಕರು, ಗೌರಿಬಿದನೂರು ವಲಯ ರವರ ಪತ್ರ

ದಿನಾಂಕ:15/03/2012 ರೊಂದಿಗೆ ಲಗತ್ತಿಸಿ ಈ ಮೊಕದ್ದಮೆಯಲ್ಲಿ ಜಪ್ತುಪಡಿಸಲಾದ 08 ಲೀ. ಸೇಂದಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಮಾದರಿ ಹೊರತುಪಡಿಸಿ ಉಳಿದ ಸೇಂದಿಯನ್ನು ನಿಯಮಾನುಸಾರ ಆದೇಶಿಸಬೇಕೆಂದು ಕೋರಿರುತ್ತಾರೆ.

ತನಿಖಾಧಿಕಾರಿಗಳು ಗೌರಿಬಿದನೂರು ವಲಯ ರವರು ತನಿಖೆಯನ್ನು ಮುಂದುವರೆಸಿ ಪ್ರಕರಣದಲ್ಲಿ ಜಪ್ತು ಮಾಡಿರುವ ಟಿವಿಎಸ್ ಸ್ಪೋರ್ಟ್+ ರ ನೊಂದಣಿ ಸಂ:ಕೆಎ–01 ಯು–6119 ರ ಮಾಲೀಕರ ಬಗ್ಗೆ ಸಂಬಂಧಿಸಿದ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಂದ 'ಬಿ' ರಿಜಿಸ್ಟರ್ ಎಕ್ಸ್‌ಟ್ರ್ಯಾಕ್ಟ್ ಪಡೆದು ಈ ಪ್ರಾಧಿಕಾರಕ್ಕೆ ಸಲ್ಲಿಸಿದ್ದು, ಸದರಿ 'ಬಿ' ರಿಜಿಸ್ಟರ್ ಎಕ್ಸ್‌ಟ್ರ್ಯಾಕ್ಟ್ ಪ್ರಕಾರ ರವೀಂದ್ರನ್ ಎಂ. ಬಿನ್ ಮಣಿ ಆರ್.ಎಸ್., ನಂ:02, ಚಿಕ್ಕಬಯ್ಯ ಗಾರ್ಡನ್, ಎನ್.ಜಿ. ಪಾಳ್ಯ, ಧರ್ಮರಾಮ್ ಕಾಲೇಜ್ ಪೋಸ್ಟ್, ಬೆಂಗಳೂರು–29 ಏಂಬುದಾಗಿದ್ದು, ಇದರ ಮೇರೆಗೆ ಸದರಿ ವಾಹನ ನೊಂದಣಿ ಮಾಲೀಕರಿಗೆ ಮತ್ತು ಆರೋಪಿಗೆ ಈ ಪ್ರಾಧಿಕಾರದಿಂದ ದಿನಾಂಕ:27/03/2012 ರಂದು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43(ಬಿ) ಪ್ರಕಾರ ಕಾರಣ ಕೇಳಿ ನೊಟೀಸ್‌ನ್ನು ಆರ್.ಪಿ.ಎ.ಡಿ. ಮೂಲಕ ರವಾನಿಸಿದ್ದು, ನೋಟೀಸ್ ಆರೋಪಿಗೆ ಜಾರಿಯಾದ ಬಗ್ಗೆ ಸ್ವೀಕೃತಿ ಬಂದಿರುತ್ತದೆ. ಮಾಲೀಕರಿಗೆ ಜಾರಿಯಾಗದೇ ಈ ಕಛೇರಿಗೆ ವಾಪಸ್ಸು ಬಂದಿರುತ್ತದೆ. ಅಬಕಾರಿ ನಿರೀಕ್ಷಕರು ದಿನಾಂಕ:16/05/2012 ರಂದು ನೊಟೀಸ್‌ನ್ನು ವಾಹನ ಮಾಲೀಕರಿಗೆ ಮತ್ತು ಆರೋಪಿಗೆ ಖುದ್ದು ಜಾರಿ ಮಾಡಿ ಸ್ವೀಕೃತಿಯನ್ನು ಪಡೆದು ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ಪ್ರಕರಣದಲ್ಲಿ ಜಪ್ತುಪಡಿಸಿರುವ ವಾಹನದ ಮೂಲ ದಾಖಲಾತಿಗಳೊಂದಿಗೆ ಈ ಕಛೇರಿಗೆ ವಾಹನ ಮಾಲೀಕರಾಗಲೀ / ಆರೋಪಿಯಾಗಲೀ ಇಲ್ಲಿಯವರೆವಿಗೂ ಮುಂದೆ ಬಾರದೇ ಇರುವುದರಿಂದ ಈ ವಾಹನಕ್ಕೆ ವಾರಸ್ಸುದಾರರಿಲ್ಲದ ವಾಹನವೆಂದು ಪರಿಗಣಿಸಿ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43(ಸಿ) ಅಡಿಯಲ್ಲಿ ಟಿವಿಎಸ್ ಸ್ಪೋರ್ಟ್+ ರ ನೊಂದಣಿ ಸಂ:ಕೆಎ–01 ಯು–6119 ರ ದ್ವಿಚಕ್ರ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ದಿನಾಂಕ:23/05/2012 ರ ಪತ್ರದಲ್ಲಿ ಅಬಕಾರಿ ನಿರೀಕ್ಷಕರು, ಗೌರಿಬಿದನೂರು ವಲಯ ರವರು ಶಿಫಾರಸ್ಸು ಮಾಡಿರುತ್ತಾರೆ.

ದಿನಾಂಕ:08/06/2012 ರಂದು ಪ್ರಕರಣವನ್ನು ಪ್ರಾಧಿಕಾರದಲ್ಲಿ ವಿಚಾರಣೆಗೆ ತೆಗೆದುಕೊಳ್ಳಲಾಗಿ ವಾಹನ ಮಾಲೀಕತ್ವ ಹೊಂದಿರುವವರು ಈ ಪ್ರಾಧಿಕಾರದ ಮುಂದೆ ಇಲ್ಲಿಯತನಕ ಯಾರೂ ಹಾಜರಾಗಿರುವುದಿಲ್ಲ. ಪ್ರಕರಣದ ಪ್ರಥಮ ಮಾಹಿತಿ ವರದಿ, ಮಹಜರ್‌ನ್ನು ಇತರೆ ದಾಖಲೆಗಳನ್ನು ಪರಿಶೀಲಿಸಲಾಗಿ ಅಬಕಾರಿ ನಿರೀಕ್ಷಕರು, ಚಿಕ್ಕಬಳ್ಳಾಪುರ ಉಪ ವಿಭಾಗ ಇವರು ದಿನಾಂಕ:16/02/2012 ರಂದು ಗೌರಿಬಿದನೂರು ತಾಲ್ಲೂಕು ಜಿ. ಕೊತ್ತೂರು–ಎಲ್ಲೋಡು ಮಾರ್ಗದಲ್ಲಿ ರಸ್ತೆಕಾವಲು ಮಾಡುತ್ತಿರುವಾಗ ಟಿವಿಎಸ್ ಸ್ಪೋರ್ಟ್+ ರ ನೊಂದಣಿ ಸಂ:ಕೆಎ–01 ಯು–6119 ರ ದ್ವಿಚಕ್ರ ವಾಹನದಲ್ಲಿ 08 ಲೀ. ಸೇಂದಿಯನ್ನು ಹೊಂದಿ ಅಕ್ರಮವಾಗಿ ಸಾಗಾಣಿಕೆ ಮಾಡುವ ಸಮಯದಲ್ಲಿ ಜಪ್ತುಪಡಿಸಿರುವುದು ಹಾಗೂ ರಾಸಾಯನಿಕ ತಜ್ಞರ ವರದಿಯನ್ವಯ ಸೇಂದಿಯಲ್ಲಿ "ಈಥೈಲ್ ಆಲ್ಕೋಹಾಲ್" ಅಂಶ ಕಂಡು ಬಂದಿರುವುದರಿಂದ ಈ ವಾಹನವನ್ನು ಅಬಕಾರಿ ವಸ್ತುಗಳ ಅಕ್ರಮ ಸಾಗಾಣಿಕೆಗೆ ಉಪಯೋಗಿಸಿರುವುದು ಸಾಬೀತಾಗಿರುತ್ತದೆ ಆದುದರಿಂದ ಈ ಕೆಳಗಿನಂತೆ ಆದೇಶ.

## ಆದೇಶ

ಎನ್. ಚಂದ್ರಶೇಖರ, ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು, ಚಿಕ್ಕಬಳ್ಳಾಪುರ ಜಿಲ್ಲೆ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಕಲಂ 43(ಬಿ) ಅಡಿ ಕ್ರಮ ಜರುಗಿಸಲಾಗಿದ್ದು, ಅಬಕಾರಿ ನಿರೀಕ್ಷಕರು, ಚಿಕ್ಕಬಳ್ಳಾಪುರ ಉಪ, ಚಿಕ್ಕಬಳ್ಳಾಪುರ ರವರ ದಿನಾಂಕ:16/02/2012 ರ ಪ್ರ.ಮಾ.ವ.ಸಂ:36/2011–12 ರಲ್ಲಿ ಜಪ್ತುಪಡಿಸಿರುವ 08 ಲೀಟರ್ ಸೇಂದಿಯಲ್ಲಿ ಮಾದರಿ ಹೊರೆತುಪಡಿಸಿ 07 ಲೀಟರ್ ಸೇಂದಿಯನ್ನು ಮತ್ತು ಟಿವಿಎಸ್ ಸ್ಪೋರ್ಟ್+ ರ ನೊಂದಣಿ ಸಂ:ಕೆಎ–01 ಯು–6119 ರ ಇಂಜಿನ್ ನಂ:ಡಿಎಫ್5ಜಿಬಿ1032526, ಚಾಸೀಸ್ ನಂ:ಎಂಡಿ625ಎಂಎಫ್53ಬಿ1ಜಿ33721 ರ ದ್ವಿಚಕ್ರ ವಾಹನವನ್ನು ವಾರಸ್ಸುದಾರರಿಲ್ಲದ ವಾಹನವೆಂದು ಪರಿಗಣಿಸಿ ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಸಿ) ಅಡಿಯಲ್ಲಿ ಕರ್ನಾಟಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ. ಮಾದರಿ ಸೇಂದಿಯನ್ನು ಹೊರೆತುಪಡಿಸಿ ಉಳಿದ ಸೇಂದಿಯನ್ನು ನಿಯಮಾನುಸಾರ ಮಹಜರ್ ಕ್ರಮದೊಂದಿಗೆ ನಾಶಪಡಿಸಲು ಸೂಚಿಸಿದೆ.

ವಾಹನಕ್ಕೆ ಸಂಬಂಧಿಸಿದಂತೆ ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸುವುದಾದಲ್ಲಿ ಈ ಆದೇಶ ಹೊರಡಿಸಿದ ದಿನಾಂಕದಿಂದ 30 ದಿವಸಗಳೊಳಗೆ ಸಲ್ಲಿಸಬಹುದಾಗಿದೆ. ತಪ್ಪಿದ್ದಲ್ಲಿ ಇದೇ ಅಂತಿಮ ಆದೇಶವಾಗಿ ಊರ್ಜಿತಗೊಳ್ಳುತ್ತದೆ.

ಈ ಆದೇಶವನ್ನು ದಿನಾಂಕ:08/06/2012 ರಂದು ಈ ಪ್ರಾಧಿಕಾರದ ಮೊಹರಿನೊಂದಿಗೆ ಹೊರಡಿಸಿರುತ್ತೇನೆ. ಮೇಲ್ಮನವಿ ಅವಧಿ ಮುಗಿದ ನಂತರ ಕಾನೂನು ರೀತ್ಯಾ ಮೇಲ್ಕಂಡ ವಾಹನವನ್ನು ವಿಲೇವಾರಿ ಮಾಡಲು ಆದೇಶಿಸಿದೆ.

**ಎನ್. ಚಂದ್ರಶೇಖರ,**
ಪ್ರಾಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,
ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ.

**ಪಿ.ಆರ್. 861**

**ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು, ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ. ಇವರ ನ್ಯಾಯಾಲಯದಲ್ಲಿ**

**ಪ್ರಕರಣ ಸಂ: ಇಎಕ್ಸ್‌ಇ/ಚಿಪುರ/ಡಿಟಿಸಿಆರ್/304/2011–12, ದಿನಾಂಕ: 08/06/2012**

**ಉಪಸ್ಥಿತರು:– ಎನ್. ಚಂದ್ರಶೇಖರ, ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು, ಚಿಕ್ಕಬಳ್ಳಾಪುರ ಜಿಲ್ಲೆ.**

**ಫಿರ್ಯಾದುದಾರರು:–** **–ವಿರುದ್ಧ–** **ಆರೋಪಿ:–**

ಆರಕ್ಷಕ ಉಪ ನಿರೀಕ್ಷಕರು,
ಮಂಚೇನಹಳ್ಳಿ ಪೊಲೀಸ್ ಠಾಣೆ,
ಗೌರಿಬಿದನೂರು ತಾಲ್ಲೂಕು.

1) ಶ್ರೀನಿವಾಸ ಬಿನ್ ರಾಮೇಗೌಡ, ಬಂದಾರ್ಲಹಳ್ಳಿ, ತೊಂಡೇಬಾವಿ ಹೋ॥ ಗೌರಿಬಿದನೂರು ತಾಲ್ಲೂಕು.

2) ಮುರಳಿ, ಕ್ಯಾಷಿಯರ್, ತೊಂಡೇಬಾವಿ ವೈನ್ಸ್, ತೊಂಡೇಬಾವಿ ರೈಲ್ವೇ ಸ್ಟೇಷನ್, ಗೌರಿಬಿದನೂರು ತಾ॥

**ಪ್ರಕರಣದ ಮುಖ್ಯಾಂಶಗಳು:–**

ದಿನಾಂಕ:17/01/2012 ರಂದು ಆರಕ್ಷಕ ಉಪ ನಿರೀಕ್ಷಕರು, ಮಂಚೇನಹಳ್ಳಿ ಪೊಲೀಸ್ ಠಾಣೆ ಇವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಕಲ್ಲಿನಾಯಕನಹಳ್ಳಿ ಗ್ರಾಮ ಪಂಚಾಯ್ತಿ ಸಮೀಪ ಅಕ್ರಮ ಮದ್ಯ ಮಾರಾಟ ಸಾಗಾಣಿಕೆ ನಡೆಯುತ್ತಿರುವುದಾಗಿ ಬಂದ ಮಾಹಿತಿಯಂತೆ ದಾಳಿಗಾಗಿ ಸಹಕರಿಸಲು ಪಂಚಾಯ್ತಿದಾರರನ್ನಾಗಿ ಬರಲು ಪಂಚರನ್ನು ಕರೆದಿದ್ದು, ಅದಕ್ಕೆ ಪೊಲೀಸ್‌ರವರಾದ ಪಿ.ಸಿ. 220, ಪಿ.ಸಿ. 164, ಪಿಸಿ251, ಎಪಿಸಿ 43 ರವರೊಂದಿಗೆ ಕಲ್ಲಿನಾಯಕನಹಳ್ಳಿ ಗ್ರಾಮ ಪಂಚಾಯ್ತಿ ಕಾರ್ಯಾಲಯದ ಬಳಿ ರಸ್ತೆಕಾವಲು ಮಾಡುತ್ತಿರುವಾಗ ತೊಂಡೇಬಾವಿ ಕಡೆಯಿಂದ ಒಂದು ದ್ವಿಚಕ್ರ ವಾಹನದಲ್ಲಿ ಯಾರೋ ಒಬ್ಬ ಆಸಾಮಿ ಪ್ಲಾಸ್ಟಿಕ್ ಚೀಲವನ್ನು ಇಟ್ಟುಕೊಂಡು ಬರುತ್ತಿದ್ದುದನ್ನು ಗಮನಿಸಿ, ಅನುಮಾನ ಬಂದು ಸದರಿ ದ್ವಿಚಕ್ರ ಸವಾರನನ್ನು ಪಿ.ಸಿ. 251 ರವರು ನಿಲ್ಲಿಸಿ, ವಾಹನವನ್ನು ಪಂಚರ ಸಮೇತ ಪರಿಶೀಲಿಸಲಾಗಿ ಒಂದು ಪ್ಲಾಸ್ಟಿಕ್ ಚೀಲದಲ್ಲಿ 90 ಎಂ.ಎಲ್.ನ 96 ರಾಜಾ ವಿಸ್ಕಿ ಪೌಚ್ ಪ್ಯಾಕ್‌ಗಳಿದ್ದು, ಇವುಗಳ ಕ್ರಮ ಸಂಖ್ಯೆ 0895415425 ರಿಂದ 0895415520 ಆಗಿರುತ್ತದೆ. ಮೇಲ್ಕಂಡ ಆಸಾಮಿಯ ಹೆಸರು ವಿಳಾಸ ಕೇಳಲಾಗಿ ಶ್ರೀನಿವಾಸ ಬಿನ್ ರಾಮೇಗೌಡ, 38–ವರ್ಷ, ಗೊಲ್ಲರು, ಜಿರಾಯ್ತಿ ವಾಸ ಬಂದಾರ್ಲಹಳ್ಳಿ ಗ್ರಾಮ ಎಂದು ತಿಳಿಸಿದ್ದು, ಮೇಲ್ಕಂಡ ಮದ್ಯದ ಪೌಚ್ ಪ್ಯಾಕ್‌ಗಳನ್ನು ಹೆಚ್ಚಿಗೆ ಲಾಭ ಪಡೆಯಲು ತೊಂಡೇಬಾವಿ ವೈನ್ಸ್ ಕ್ಯಾಷಿಯರ್ ಮುರಳಿ ರವರು ನೀಡಿರುವುದಾಗಿ ಇವುಗಳ ಬಗ್ಗೆ ಯಾವುದೇ ಪರವಾನಿಗೆ ಇರುವುದಿಲ್ಲವೆಂದು ತಿಳಿಸಿದ್ದು, ಪಚರ ಸಮಕ್ಷಮ ಪೊಲೀಸರು 90 ಎಂ.ಎಲ್. ನ 96 ರಾಜಾ ವಿಸ್ಕಿಯ ಪೌಚ್ ಪ್ಯಾಕ್‌ಗಳನ್ನು ತಮ್ಮ ವಶಕ್ಕೆ ಪಡೆದುಕೊಂಡು ಆ ಪೈಕಿ ಒಂದು ಪೌಚ್ ಪ್ಯಾಕ್‌ನ್ನು ಎಫ್‌ಎಸ್‌ಎಲ್‌ಗೆ ರವಾನಿಸಿಕೊಳ್ಳಲು ಬಿಳಿ ಬಟ್ಟೆಯಲ್ಲಿ ಸುತ್ತಿ ಕೆಎ ಎಂಬ ಅಕ್ಷರಗಳಿಂದ ಮೊಹರು ಮಾಡಿ ನಂತರ ವಾಹನವನ್ನು ಪರಿಶೀಲಿಸಲಾಗಿ ಅದು ಟಿವಿಎಸ್ ಸ್ಟಾರ್ ಸಿಟಿ ಕಂಪನಿಗೆ ಸೇರಿದ್ದು, ಇದರ ನೊಂದಣಿ ಸಂ:ಕೆಎ–50 ಇ–4186 ಆಗಿದ್ದು, ಆಸಾಮಿಯನ್ನು ದಸ್ತಗಿರಿಪಡಿಸಿಕೊಂಡು ದ್ವಿಚಕ್ರ ವಾಹನ ಮತ್ತು ಮದ್ಯವನ್ನು ಅಮಾನತ್ತುಪಡಿಸಿಕೊಂಡು ಈ ಕೃತ್ಯವು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 32, 34 ರಂತೆ ಶಿಕ್ಷಾರ್ಹ ಅಪರಾಧವಾಗಿರುವುದರಿಂದ ಈ ಬಗ್ಗೆ ತಕ್ಷೀರು ಸಂ:06/2012, ದಿನಾಂಕ:17/01/2012 ರಲ್ಲಿ ಮೊಕದ್ದಮೆ ದಾಖಲಿಸಿಕೊಂಡು ಪ್ರಥಮ ಮಾಹಿತಿ ವರದಿಯೊಂದಿಗೆ ಆರೋಪಿಯನ್ನು ನ್ಯಾಯಾಲಯಕ್ಕೆ ಹಾಜರುಪಡಿಸಿ, ತದನಂತರ ಪ್ರ.ಮಾ.ವ. ಮಹಜರ್ ಪ್ರತಿಯೊಂದಿಗೆ ಹಾಗೂ ಪಿ.ಎಫ್‌ನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿ ಮದ್ಯ ಮತ್ತು ವಾಹನವನ್ನು ಅಬಕಾರಿ ನಿರೀಕ್ಷಕರು, ಗೌರಿಬಿದನೂರು ವಲಯ ಇವರಿಗೆ ಹಸ್ತಾಂತರಿಸಲು ಅನುಮತಿ ನೀಡಬೇಕೆಂದು ಕೋರಿರುತ್ತಾರೆ.

ಅದರಂತೆ ಮದ್ಯ ಮತ್ತು ವಾಹನವನ್ನು ಅಬಕಾರಿ ನಿರೀಕ್ಷಕರು, ಗೌರಿಬಿದನೂರು ವಲಯ ಇವರಿಗೆ ಹಸ್ತಾಂತರ ಮಾಡಲು ಈ ಪ್ರಾಧಿಕಾರದಿಂದ ದಿನಾಂಕ:28/01/2012 ರಂದು ಅನುಮತಿ ನೀಡಲಾಗಿರುತ್ತದೆ.

ಈ ಮೊಕದ್ದಮೆಯಲ್ಲಿ ಜಪ್ತುಪಡಿಸಲಾದ ಟಿವಿಎಸ್ ಸ್ಟಾರ್ ಸಿಟಿ ನೊಂದಣಿ ಸಂ:ಕೆಎ–50 ಇ–4186 ರ ವಾಹನದಲ್ಲಿ 17.280 ಲೀ. ಮದ್ಯವನ್ನು ಸಾಗಾಣಿಕೆ ಮಾಡುತ್ತಿದ್ದ ಆರೋಪಿಗಳಿಗೆ ಈ ಪ್ರಾಧಿಕಾರದಿಂದ ಕಲಂ 43 (ಬಿ) ರೀತ್ಯಾ ಕಾರಣ ಕೇಳಿ ನೋಟೀಸ್‌ನ್ನು ದಿನಾಂಕ:01/03/2012 ರಂದು ಆರ್.ಪಿ.ಎ.ಡಿ. ಮೂಲಕ ರವಾನಿಸಿದ್ದು, ಆರೋಪಿಗಳು ನೋಟೀಸ್ ಪಡೆದ ಬಗ್ಗೆ ಸ್ವೀಕೃತಿ ಪತ್ರ ಬಂದಿರುತ್ತದೆ. ಈ ವಾಹನಕ್ಕೆ ಮಾಲೀಕರು ಯಾರು ಎಂಬ ಬಗ್ಗೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಯಲಹಂಕ, ಬೆಂಗಳೂರು ಇವರಿಗೆ ದಿನಾಂಕ:01/03/2012 ರಂದು ಪತ್ರ ಬರೆಯಲಾಗಿದ್ದು, ಸದರಿಯವರ 'ಬಿ' ರಿಜಿಸ್ಟರ್ ವಹಿಯ ಪ್ರಕಾರ ವಾಹನ ಮಾಲೀಕರಾದ ಗಂಗರಾಜು ಬಿನ್ ಲೇ॥ ವೆಂಕಟಪ್ಪ, ಹೊನ್ನೇನಹಳ್ಳಿ, ರಾಜಾನುಕುಂಟೆ ಅಂಚೆ, ಯಲಹಂಕ, ಬೆಂಗಳೂರು ಇವರಿಗೆ 43 (ಬಿ) ರೀತ್ಯಾ ಕಾರಣ ಕೇಳಿ ನೋಟೀಸ್‌ನ್ನು ದಿನಾಂಕ:07/03/2012 ರಂದು ಆರ್.ಪಿ.ಎ.ಡಿ. ಮೂಲಕ ರವಾನಿಸಿದ್ದು, ಮಾಲೀಕರಿಗೆ ನೋಟೀಸ್ ಜಾರಿಯಾಗದೇ ಈ ಪ್ರಾಧಿಕಾರಕ್ಕೆ ವಾಪಸ್ಸು ಬಂದಿರುತ್ತದೆ. ನೋಟೀಸ್‌ನ್ನು ಮಾಲೀಕರಿಗೆ ಜಾರಿ ಮಾಡಲು ನಿರ್ದೇಶನ ನೀಡಿದ್ದು, ಅದರಂತೆ ಗೌರಿಬಿದನೂರು ವಲಯದ ಅಬಕಾರಿ ರಕ್ಷಕರು ದಿನಾಂಕ:08/03/2012 ರಂದು ಖುದ್ದು ಮಾಲೀಕರ ವಿಳಾಸಕ್ಕೆ ಭೇಟಿ ನೀಡಿ, ಸದರಿಯವರ ಬಗ್ಗೆ ಸುತ್ತಮುತ್ತಲಿನ ನಿವಾಸಿಗಳಿಗೆ ವಿಚಾರಿಸಲಾಗಿ ಸದರಿಯವರು 4 ವರ್ಷಗಳ ಹಿಂದೆ ಗ್ರಾಮವನ್ನು ಬಿಟ್ಟುಹೋಗಿದ್ದು, ಆತ ಎಲ್ಲಿದ್ದಾನೆಂದು ತಿಳಿದುಬಂದಿರುವುದಿಲ್ಲವೆಂದು ತಿಳಿಸಿ, ಹೇಳಿಕೆ ಪತ್ರಕ್ಕೆ ಸಹಿ ಮಾಡಿರುವುದಾಗಿ ಮತ್ತು ಪ್ರಕರಣದಲ್ಲಿ ಜಪ್ತುಪಡಿಸಿರುವ ವಾಹನದ ಮೂಲ

ದಾಖಲಾತಿಗಳೊಂದಿಗೆ ಈ ಕಛೇರಿಗೆ ವಾಹನ ಮಾಲೀಕರಾಗಲೀ / ಆರೋಪಿಯಾಗಲೀ ಇಲ್ಲಿಯವರೆವಿಗೂ ಮುಂದೆ ಬಾರದೇ ಇರುವುದರಿಂದ ಈ ವಾಹನಕ್ಕೆ ವಾರಸ್ಸುದಾರರಿಲ್ಲದ ವಾಹನವೆಂದು ಪರಿಗಣಿಸಿ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43(ಸಿ) ಅಡಿಯಲ್ಲಿ ಟಿವಿಎಸ್ ಸ್ಟಾರ್ ಸಿಟಿ ನೊಂದಣಿ ಸಂ:ಕೆಎ–50 ಇ–4186 ರ ದ್ವಿಚಕ್ರ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಅಬಕಾರಿ ನಿರೀಕ್ಷಕರು, ಗೌರಿಬಿದನೂರು ವಲಯ ರವರು ಶಿಫಾರಸ್ಸು ಮಾಡಿರುತ್ತಾರೆ.

ಈ ಮೊಕದ್ದಮೆಯಲ್ಲಿ ಜಪ್ತುಪಡಿಸಿದ ಮದ್ಯದಿಂದ ತೆಗೆದ ಮಾದರಿಯನ್ನು ಮುಖ್ಯ ರಾಸಾಯನಿಕ ತಜ್ಞರು, ವಿಧಿ ವಿಜ್ಞಾನ ಪ್ರಯೋಗಾಲಯ, ಬೆಂಗಳೂರು ಇವರಿಗೆ ರಾಸಾಯನಿಕ ವಿಶ್ಲೇಷಣೆಗಾಗಿ ಸಲ್ಲಿಸಿದ್ದು, ಸದರಿ ರಾಸಾಯನಿಕ ವಿಶ್ಲೇಷಣಾಧಿಕಾರಿಗಳು, ಬೆಂಗಳೂರು ರವರ ಪತ್ರ ಸಂ:ಎಫ್ಎಸ್ಎಲ್(ಬಿಎ)529/2012, ದಿನಾಂಕ:03/05/2012 ರಲ್ಲಿ ಮಾದರಿಯಲ್ಲಿ ಮದ್ಯಸಾರ ಅಂಶ 42% ವಿ/ವಿ $25^0$ಸಿ ಇರುತ್ತದೆ ಎಂದು ಅಭಿಪ್ರಾಯದೊಂದಿಗೆ ವರದಿ ನೀಡಿದ್ದು, ಈ ವರದಿಯ ಪ್ರತಿಯನ್ನು ಅಬಕಾರಿ ನಿರೀಕ್ಷಕರು, ಗೌರಿಬಿದನೂರು ವಲಯ ಇವರು ದಿನಾಂಕ:02/06/2012 ರಂದು ತಮ್ಮ ಪತ್ರದೊಂದಿಗೆ ಲಗತ್ತಿಸುತ್ತಾ 17.280 ಲೀ. ಮದ್ಯ ಹಾಗೂ ಇದೇ ಮೊಕದ್ದಮೆಯಲ್ಲಿ ಜಪ್ತುಪಡಿಸಿರುವ ಟಿವಿಎಸ್ ಸ್ಟಾರ್ ಸಿಟಿ ನೊಂದಣಿ ಸಂ:ಕೆಎ–50 ಇ–4186 ರ ವಾಹನದ ಮಾಲೀಕತ್ವ ಹೊಂದಿರುವವರು ಇಲ್ಲಿಯತನಕ ಯಾರೂ ಬಾರದೇ ಇರುವುದರಿಂದ ಮುಂದೆಯೂ ಬರುವ ಸಾಧ್ಯತೆ ತೀರಾ ಕಡಿಮೆ ಇರುವುದರಿಂದ ಈ ವಾಹನವನ್ನು ಜಪ್ತುಪಡಿಸಿ 05 ತಿಂಗಳು ಕಳೆದಿದ್ದು, ಸರ್ಕಾರದ ರಾಜಸ್ವದ ಹಿತದೃಷ್ಟಿಯಿಂದ ಈ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಶಿಫಾರಸ್ಸು ಮಾಡಿರುತ್ತಾರೆ.

ದಿನಾಂಕ:08/06/2012 ರಂದು ಪ್ರಕರಣವನ್ನು ಪ್ರಾಧಿಕಾರದಲ್ಲಿ ವಿಚಾರಣೆಗೆ ತೆಗೆದುಕೊಳ್ಳಲಾಗಿ ವಾಹನ ಮಾಲೀಕತ್ವ ಹೊಂದಿರುವವರು ಈ ಪ್ರಾಧಿಕಾರದ ಮುಂದೆ ಇಲ್ಲಿಯತನಕ ಯಾರೂ ಹಾಜರಾಗಿರುವುದಿಲ್ಲ. ಪ್ರಕರಣದ ಪ್ರಥಮ ಮಾಹಿತಿ ವರದಿ, ಮಹಜರ್‌ನ್ನು ಇತರೆ ದಾಖಲೆಗಳನ್ನು ಪರಿಶೀಲಿಸಲಾಗಿ ಆರಕ್ಷಕ ಉಪ ನಿರೀಕ್ಷಕರು, ಮಂಚೇನಹಳ್ಳಿ ಪೊಲೀಸ್ ಠಾಣೆ, ಗೌರಿಬಿದನೂರು ತಾಲ್ಲೂಕು ಇವರು ದಿನಾಂಕ:17/01/2012 ರಂದು ತನಿಖಾಧಿಕಾರಿಗಳಿಗೆ ಬಂದ ಬಾತ್ಮೀಯ ಮೇರೆಗೆ ಗೌರಿಬಿದನೂರು ತಾಲ್ಲೂಕು ಕಲ್ಲಿನಾಯಕನಹಳ್ಳಿ ಗ್ರಾಮ ಪಂಚಾಯ್ತಿ ಬಳಿ ರಸ್ತೆಕಾವಲು ಮಾಡುತ್ತಿದ್ದಾಗ ಟಿವಿಎಸ್ ಸ್ಟಾರ್ ಸಿಟಿ ನೊಂದಣಿ ಸಂ:ಕೆಎ–50 ಇ–4186 ರ ದ್ವಿಚಕ್ರ ವಾಹನದಲ್ಲಿ 17.280 ಲೀ. ಮದ್ಯವನ್ನು ಹೊಂದಿ ಅಕ್ರಮವಾಗಿ ಸಾಗಾಣಿಕೆ ಮಾಡುವ ಸಮಯದಲ್ಲಿ ಜಪ್ತುಪಡಿಸಿರುವುದು ಹಾಗೂ ರಾಸಾಯನಿಕ ತಜ್ಞರ ವರದಿಯನ್ವಯ ಮದ್ಯದಲ್ಲಿ "ಈಥೈಲ್ ಆಲ್ಕೋಹಾಲ್" ಅಂಶ ಕಂಡು ಬಂದಿರುವುದರಿಂದ ಈ ವಾಹನವನ್ನು ಅಬಕಾರಿ ವಸ್ತುಗಳ ಅಕ್ರಮ ಸಾಗಾಣಿಕೆಗೆ ಉಪಯೋಗಿಸಿರುವುದು ಸಾಬೀತಾಗಿರುತ್ತದೆ ಆದುದರಿಂದ ಈ ಕೆಳಗಿನಂತೆ ಆದೇಶ.

## ಆದೇಶ

ಎನ್. ಚಂದ್ರಶೇಖರ, ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು, ಚಿಕ್ಕಬಳ್ಳಾಪುರ ಜಿಲ್ಲೆ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಕಲಂ 43(ಬಿ) ಅಡಿ ಕ್ರಮ ಜರುಗಿಸಲಾಗಿದ್ದು, ಆರಕ್ಷಕ ಉಪ ನಿರೀಕ್ಷಕರು, ಮಂಚೇನಹಳ್ಳಿ ಪೊಲೀಸ್ ಠಾಣೆ, ಗೌರಿಬಿದನೂರು ತಾಲ್ಲೂಕು ರವರ ದಿನಾಂಕ:17/01/2012 ರ ಪ್ರ.ಮಾ.ವ.ಸಂ:06/2012 ರಲ್ಲಿ ಜಪ್ತುಪಡಿಸಿರುವ ಟಿವಿಎಸ್ ಸ್ಟಾರ್ ಸಿಟಿ ನೊಂದಣಿ ಸಂ:ಕೆಎ–50 ಇ–4186 ರ ಇಂಜಿನ್ ನಂ:ಎಎಫ್ಎಸ್ಇ61427802, ಚಾಸೀಸ್ ನಂ:ಎಂಡಿ625ಕೆಎಫ್5762ಇ28066 ರ ದ್ವಿಚಕ್ರ ವಾಹನವನ್ನು ವಾರಸ್ಸುದಾರರಿಲ್ಲದ ವಾಹನವೆಂದು ಪರಿಗಣಿಸಿ ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಸಿ) ಅಡಿಯಲ್ಲಿ ಕರ್ನಾಟಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ ಹಾಗೂ 17.280 ಲೀ. ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಮಾದರಿ ಹೊರೆತುಪಡಿಸಿ ಉಳಿದ ಮದ್ಯವನ್ನು ನಿಯಮಾನುಸಾರ ಮಹಜರ್ ಕ್ರಮದ ಮೂಲಕ ವಿಲೇವಾರಿ ಮಾಡಲು ಆದೇಶಿಸಿದೆ.

ವಾಹನಕ್ಕೆ ಸಂಬಂಧಿಸಿದಂತೆ ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸುವುದಾದಲ್ಲಿ ಈ ಆದೇಶ ಹೊರಡಿಸಿದ ದಿನಾಂಕದಿಂದ 30 ದಿವಸಗಳೊಳಗೆ ಸಲ್ಲಿಸಬಹುದಾಗಿದೆ. ತಪ್ಪಿದ್ದಲ್ಲಿ ಇದೇ ಅಂತಿಮ ಆದೇಶವಾಗಿ ಊರ್ಜಿತಗೊಳ್ಳುತ್ತದೆ.

ಈ ಆದೇಶವನ್ನು ದಿನಾಂಕ:08/06/2012 ರಂದು ಈ ಪ್ರಾಧಿಕಾರದ ಮೊಹರಿನೊಂದಿಗೆ ಹೊರಡಿಸಿರುತ್ತೇನೆ. ಮೇಲ್ಮನವಿ ಅವಧಿ ಮುಗಿದ ನಂತರ ಕಾನೂನು ರೀತ್ಯಾ ಮೇಲ್ಕಂಡ ವಾಹನವನ್ನು ವಿಲೇವಾರಿ ಮಾಡಲು ಆದೇಶಿಸಿದೆ.

**ಎನ್. ಚಂದ್ರಶೇಖರ,**
ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು,
ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ.

**ಪಿ.ಆರ್. 863**

**ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು, ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ. ಇವರ ನ್ಯಾಯಾಲಯದಲ್ಲಿ**

**ಪ್ರಕರಣ ಸಂ: ಇಎಕ್ಸ್‌ಇ/ಚಿಪುರ/ಡಿಟಿಸಿಆರ್/329/2011–12, ದಿನಾಂಕ: 25/05/2012**

**ಉಪಸ್ಥಿತರು:– ಎನ್. ಚಂದ್ರಶೇಖರ, ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು, ಚಿಕ್ಕಬಳ್ಳಾಪುರ ಜಿಲ್ಲೆ.**

**ಪಿರ್ಯಾದುದಾರರು:–** **–ವಿರುದ್ಧ–** **ಆರೋಪಿ:–**

ಆರಕ್ಷಕ ನಿರೀಕ್ಷಕರು,
ಅಬಕಾರಿ ಜಾರಿ ಮತ್ತು ಲಾಟರಿ ನಿಷೇದ ದಳ, ಚಿಕ್ಕಬಳ್ಳಾಪುರ.

ಸಿದ್ಧಪ್ಪ ಬಿನ್ ಲೇಟ್ ಮಲ್ಲಣ್ಣ, ಅಲಕಾಪುರ ಗ್ರಾಮ,
ಗೌರಿಬಿದನೂರು ತಾಲ್ಲೂಕು.

**ಪ್ರಕರಣದ ಮುಖ್ಯಾಂಶಗಳು:–**

ಆರಕ್ಷಕ ಉಪ ನಿರೀಕ್ಷಕರು, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ, ವಿಶೇಷ ಪೊಲೀಸ್ ಠಾಣೆ, ಚಿಕ್ಕಬಳ್ಳಾಪುರ ಇವರಿಗೆ ದಿನಾಂಕ:05/02/2012 ರಂದು ಆಂಧ್ರ ಪ್ರದೇಶ ರಾಜ್ಯದ ಕಡೆಯಿಂದ ಸಿದ್ದಪ್ಪ ಎಂಬುವವರು ಜಗರೆಡ್ಡಿಹಳ್ಳಿ ಕಡೆಯಿಂದ ಅಲಕಾಪುರ ಗ್ರಾಮಕ್ಕೆ ದ್ವಿಚಕ್ರ ವಾಹನದಲ್ಲಿ ಅಕ್ರಮವಾಗಿ ಯಾವುದೇ ಪರವಾನಿಗೆ ಇಲ್ಲದೇ ಸೇಂದಿಯನ್ನು ಸಾಗಾಣಿಕೆ ಮಾಡುತ್ತಿದ್ದಾನೆ ಎಂಬ ಬಗ್ಗೆ ಬಂದ ಖಚಿತ ಮಾಹಿತಿಯ ಮೇರೆಗೆ ದಾಳಿ ನಡೆಸಲು ಪೊಲೀಸ್ ಸಿಬ್ಬಂದಿ ಮತ್ತು ಪಂಚರು ಸೇರಿ ಸರ್ಕಾರಿ ವಾಹನದಲ್ಲಿ ಜಗರೆಡ್ಡಿಹಳ್ಳಿಯಿಂದ ಮುಂದೆ 1/2 ಕಿ.ಮೀ. ದೂರದಲ್ಲಿರುವ ಮೇಳ್ಯಾ ಗ್ರಾಮಕ್ಕೆ ಹೋಗುವ ರಸ್ತೆಯ ಸ್ವಲ್ಪ ದೂರದ ಮರೆಯಲ್ಲಿ ವಾಹನವನ್ನು ನಿಲ್ಲಿಸಿ ರಸ್ತೆಕಾವಲು ಕಾಯುತ್ತಿದ್ದಾಗ ಸಮಯ ಸಂಜೆ 5–30 ಗಂಟೆ ಸಮಯದಲ್ಲಿ ಒಬ್ಬ ಆಸಾಮಿ ದ್ವಿಚಕ್ರ ವಾಹನದಲ್ಲಿ ಬರುತ್ತಿದ್ದು, ಟಿವಿಎಸ್ ಎಕ್ಸ್‌ಎಲ್ ಹೆವಿಡ್ಯುಟಿ ದ್ವಿಚಕ್ರ ವಾಹನದ ಮುಂದೆ ಒಂದು ಕ್ಯಾನ್ ಇಟ್ಟುಕೊಂಡು ಬರುತ್ತಿದ್ದು, ಪೊಲೀಸರು ಸದರಿ ವಾಹನವನ್ನು ತಡೆದು ನಿಲ್ಲಿಸಿ, ಆಸಾಮಿಯ ಹೆಸರು ವಿಳಾಸದ ವಿಚಾರ ಮಾಡಲಾಗಿ ಆಸಾಮಿ ತನ್ನ ಹೆಸರು ಸಿದ್ದಪ್ಪ ಬಿನ್ ಲೇ॥ ಮಲ್ಲಣ್ಣ, ಅಲಕಾಪುರ ಗ್ರಾಮ, ಗೌರಿಬಿದನೂರು ತಾಲ್ಲೂಕು ಎಂದು ತಿಳಿಸಿದ್ದು, ನಂತರ ದ್ವಿಚಕ್ರ ವಾಹನದ ಮಧ್ಯಭಾಗದಲ್ಲಿ ಬಿಳಿ ಬಣ್ಣದ ಪ್ಲಾಸ್ಟಿಕ್ ಕ್ಯಾನ್‌ನಲ್ಲಿ 30 ಲೀ. ಸೇಂದಿಯಿದ್ದು, ಈ ಬಗ್ಗೆ ಯಾವುದಾದರೂ ಪರವಾನಿಗೆ ಮತ್ತು ವಗೈರೆ ಇದೆಯೇ ಎಂದು ಕೇಳಲಾಗಿ ಯಾವುದು ಇಲ್ಲವೆಂದು ಮತ್ತು ಈ ಸೇಂದಿಯನ್ನು ಗ್ರಾಮಗಳಲ್ಲಿ ಸಾರ್ವಜನಿಕರಿಗೆ ಮಾರಾಟ ಮಾಡಲು ತೆಗೆದುಕೊಂಡು ಹೋಗುತ್ತಿರುವುದಾಗಿ ಆಸಾಮಿಯು ತಿಳಿಸಿದ್ದು, ನಂತರ ಪಂಚರ ಸಮಕ್ಷಮ ಸೇಂದಿಯಿಂದ ಎಫ್.ಎಸ್.ಎಲ್. (ರಸಾಯನಿಕ) ಪರೀಕ್ಷೆಗಾಗಿ ಕಳುಹಿಸಲು 180 ಎಂಎಲ್ ನ ಒಂದು ಬಾಟಲಿನಲ್ಲಿ ಸೇಂದಿಯನ್ನು ತುಂಬಿ ಮುಚ್ಚಳ ಹಾಕಿ ಬಿಳಿ ಬಟ್ಟೆಯಿಂದ ಸುತ್ತಿ ದಾರದಿಂದ ಕಟ್ಟಿ 'ಎನ್' ಎಂಬ ಅಕ್ಷರದಿಂದ ಮೊಹರು ಮಾಡಲಾಯಿತು. ನಂತರ ಸಾಗಾಣಿಕೆ ಮಾಡಲು ಉಪಯೋಗಿಸಿದ ವಾಹನವನ್ನು ಪರಿಶೀಲಿಸಲಾಗಿ ಇದು ಹಸಿರು ಬಣ್ಣದ ಟಿವಿಎಸ್ ಎಕ್ಸ್‌ಎಲ್ ಹೆವಿಡ್ಯುಟಿ ನೊಂದಣಿ ಸಂ:ಕೆಎ–04 ಇಎನ್–7174 ಆಗಿದ್ದು, ಸದರಿ ವಾಹನದ ದಾಖಲೆಗಳ ಬಗ್ಗೆ ವಿಚಾರಿಸಲಾಗಿ ತಮ್ಮ ಯಜಮಾನರಾದ ಜಗದೀಶಪ್ಪ ರವರ ಬಳಿ ಇರುವುದಾಗಿ ತಿಳಿಸಿರುತ್ತಾನೆ. ಸದರಿ ಆಸಾಮಿಯನ್ನು ದ್ವಿಚಕ್ರ ವಾಹನ ಮತ್ತು ಸೇಂದಿಯನ್ನು ಅಮಾನತ್ತುಪಡಿಸಿಕೊಂಡು ಈ ಕೃತ್ಯವು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 32, 34 ರಂತೆ ಶಿಕ್ಷಾರ್ಹ ಅಪರಾಧವಾಗಿರುವುದರಿಂದ ಈ ಬಗ್ಗೆ ತಕ್ಷೀರು ಸಂ:19/2012, ದಿನಾಂಕ:05/02/2012 ರಲ್ಲಿ ಮೊಕದ್ದಮೆ ದಾಖಲಿಸಿಕೊಂಡು ಪ್ರಥಮ ಮಾಹಿತಿ ವರದಿಯೊಂದಿಗೆ ಆರೋಪಿಯನ್ನು ನ್ಯಾಯಾಲಯಕ್ಕೆ ಹಾಜರುಪಡಿಸಿ, ತದನಂತರ ಪ್ರ.ಮಾ.ವ. ಮಹಜರ್ ಪ್ರತಿಯೊಂದಿಗೆ ಹಾಗೂ ಪಿ.ಎಫ್‌ನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿ ಸೇಂದಿ ಮತ್ತು ದ್ವಿಚಕ್ರ ವಾಹನವನ್ನು ಅಬಕಾರಿ ನಿರೀಕ್ಷಕರು, ಗೌರಿಬಿದನೂರು ವಲಯ ಇವರಿಗೆ ಹಸ್ತಾಂತರಿಸಲು ಅನುಮತಿ ನೀಡಬೇಕೆಂದು ಕೋರಿರುತ್ತಾರೆ.

ವಶಪಡಿಸಿಕೊಂಡಿರುವ ವಸ್ತುಗಳ ಪಟ್ಟಿ ನಂ:17/2012 ರಲ್ಲಿ ವಾಹನವನ್ನು ಅಬಕಾರಿ ನಿರೀಕ್ಷಕರು, ಗೌರಿಬಿದನೂರು ವಲಯ ಇವರಿಗೆ ಹಸ್ತಾಂತರ ಮಾಡಲು ಪ್ರಾಧಿಕಾರದಿಂದ ಅನುಮತಿ ನೀಡಲಾಗಿದೆ.

ಅಬಕಾರಿ ನಿರೀಕ್ಷಕರು, ಗೌರಿಬಿದನೂರು ವಲಯ ರವರು ತನಿಖೆಯನ್ನು ಮುಂದುವರೆಸಿ ಜಪ್ತುಪಡಿಸಿದ ಸೇಂದಿಯಿಂದ ತೆಗೆಯಲಾದ ಮಾದರಿಯನ್ನು ರಾಸಾಯನಿಕ ವಿಶ್ಲೇಷಣೆಗಾಗಿ ಕೇಂದ್ರ ರಾಸಾಯನಿಕ ಪ್ರಯೋಗಾಲಯ, ಅಬಕಾರಿ ಇಲಾಖೆ, ಬೆಂಗಳೂರು ಇವರಿಗೆ ಸಲ್ಲಿಸಿದ್ದು, ತಜ್ಞರ ವರದಿ ಸಂ:ಸಿಸಿಎಲ್:1190/2012, ದಿನಾಂಕ:25/02/2012 ರ ಪತ್ರದಂತೆ ರಾಸಾಯನಿಕ ವಿಶ್ಲೇಷಣೆಗೆ ಕಳುಹಿಸಲಾದ ಮಾದರಿಯಲ್ಲಿ ಮದ್ಯಸಾರದ ಅಂಶ 3.28% ವಿ.ವಿ. ಇದ್ದು, ಇದರಲ್ಲಿ ಈಥೈಲ್ ಅಲ್ಕೋಹಾಲ್ ಮತ್ತು ಕ್ಲೋರಲ್ ಹೈಡ್ರೇಟ್ ಅಂಶ ಕಂಡುಬಂದಿದ್ದು, ಇದು ಮಾನವನ ಸೇವನೆಗೆ ಯೋಗ್ಯವಾಗಿರುವುದಿಲ್ಲ ಎಂದು ತಜ್ಞರು ಅಭಿಪ್ರಾಯ ನೀಡಿದ್ದು, ತಜ್ಞರ ವರದಿಯ ಪ್ರತಿಯನ್ನು ಅಬಕಾರಿ ನಿರೀಕ್ಷಕರು, ಗೌರಿಬಿದನೂರು ವಲಯ ರವರ ಪತ್ರ ದಿನಾಂಕ:31/03/2012 ರೊಂದಿಗೆ ಲಗತ್ತಿಸಿ ಈ ಮೊಕದ್ದಮೆಯಲ್ಲಿ ಜಪ್ತುಪಡಿಸಲಾದ 30 ಲೀ. ಸೇಂದಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ತನಿಖಾಧಿಕಾರಿಗಳು ವರದಿ ಸಲ್ಲಿಸಿದ್ದು, ಅದರಂತೆ ಟಿವಿಎಸ್ ಎಕ್ಸ್‌ಎಲ್ ಹೆವಿಡ್ಯುಟಿ ನೊಂದಣಿ ಸಂ:ಕೆಎ–04 ಇಎನ್–7174 ರ ವಾಹನ ಹೊರತುಪಡಿಸಿ ಪ್ರಕರಣ ತನಿಖೆ ಕಾಯ್ದರಿಸಿ 30 ಲೀ. ಸೇಂದಿಯನ್ನು ದಿನಾಂಕ;12/04/2012 ರಂದು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಮಾದರಿ ಹೊರತುಪಡಿಸಿ ಉಳಿದ ಸೇಂದಿಯನ್ನು ನಿಯಮಾನುಸಾರ ನಾಶಪಡಿಸಲು ಪ್ರಾಧಿಕಾರದಿಂದ ಆದೇಶಿಸಲಾಗಿತ್ತು.

ಅಬಕಾರಿ ನಿರೀಕ್ಷಕರು, ಗೌರಿಬಿದನೂರು ವಲಯ ರವರು ತನಿಖೆಯನ್ನು ಮುಂದುವರೆಸಿ ಪ್ರಕರಣದಲ್ಲಿ ಆರೋಪಿಗೆ ಈ ಪ್ರಾಧಿಕಾರದಿಂದ ದಿನಾಂಕ:14/03/2012 ರಂದು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43(ಬಿ) ರೀತ್ಯಾ ಕಾರಣ ಕೇಳಿ ನೋಟೀಸ್‌ನ್ನು ಜಾರಿ ಮಾಡಿ ಸ್ವೀಕೃತಿಯನ್ನು ಪಡೆಯಲಾಗಿರುತ್ತದೆ. ನಂತರ ಜಪ್ತು ಮಾಡಿರುವ ಟಿವಿಎಸ್ ಎಕ್ಸ್‌ಎಲ್ ಹೆವಿಡ್ಯುಟಿ ನೊಂದಣಿ ಸಂ:ಕೆಎ–04 ಇಎನ್–7174 ರ ಮಾಲೀಕರ ಬಗ್ಗೆ ಸಂಬಂಧಿಸಿದ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಂದ 'ಬಿ' ರಿಜಿಸ್ಟರ್ ಎಕ್ಸ್‌ಟ್ರ್ಯಾಕ್ಟ್ ಪಡೆದು ಈ ಪ್ರಾಧಿಕಾರಕ್ಕೆ ಸಲ್ಲಿಸಿದ್ದು, ಸದರಿ 'ಬಿ' ರಿಜಿಸ್ಟರ್ ಎಕ್ಸ್‌ಟ್ರ್ಯಾಕ್ಟ್ ಪ್ರಕಾರ ಶ್ರೀ ಮಹಮದ್ ರಫೀಕ್ ಬಿನ್ ಅಬ್ದುಲ್ ಕಾದರ್, 1ನೇ ಮಹಡಿ, ಡಿನ್ನರ್ ಮೈನ್ ರೋಡ್, ಆರ್.ಟಿ. ನಗರ ಪೋಸ್ಟ್, ಬೆಂಗಳೂರು–32 ಎಂದು ವರದಿಯ ಮೇರೆಗೆ ಸದರಿ ನೊಂದಣಿ ಮಾಲೀಕರಿಗೆ ಈ ಪ್ರಾಧಿಕಾರದಿಂದ ದಿನಾಂಕ:03/04/2012 ರಂದು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43(ಬಿ) ಪ್ರಕಾರ ಕಾರಣ ಕೇಳಿ ನೋಟೀಸ್‌ನ್ನು ಆರ್.ಪಿ.ಎ.ಡಿ. ಮೂಲಕ ರವಾನಿಸಿದ್ದು, ನೋಟೀಸ್ ಜಾರಿಯಾಗದೇ ಈ ಕಛೇರಿಗೆ ವಾಪಸ್ಸು ಬಂದಿರುತ್ತದೆ. ಸದರಿ ನೋಟೀಸ್‌ನ್ನು ಮಾಲೀಕರಿಗೆ ಜಾರಿ ಮಾಡಲು ಅಬಕಾರಿ ನಿರೀಕ್ಷಕರು, ಗೌರಿಬಿದನೂರು ವಲಯ ಇವರಿಗೆ ರವಾನಿಸಿ ನಿರ್ದೇಶನ ನೀಡಿದ್ದು, ಅದರಂತೆ ವಲಯ ಕಛೇರಿಯ ಅಬಕಾರಿ ರಕ್ಷಕರಾದ ಶ್ರೀ ಎ.ಕೆ. ಹನುಮಂತರಾಯಗೌಡ ರವರು ಮಾಲೀಕರ ವಿಳಾಸಕ್ಕೆ ಖುದ್ದು ಭೇಟಿ ನೀಡಿ ಮಾಲೀಕರ ವಾಸದ ಮನೆ ಸಂಖ್ಯೆ ಬಗ್ಗೆ ಅಲ್ಲಿನ ನಿವಾಸಿಗಳನ್ನು ವಿಚಾರಿಸಿದ್ದು, ಸದರಿಯವರು ಆ ಸ್ಥಳದಲ್ಲಿ ಇಲ್ಲದೇ ಇರುವುದರಿಂದ ನೋಟೀಸ್‌ನ್ನು ಜಾರಿ ಮಾಡಲು ಸಾಧ್ಯವಾಗಿರುವುದಿಲ್ಲವೆಂದು ಷರಾವನ್ನು ನೋಟೀಸ್‌ನ ಹಿಂಬದಿಯಲ್ಲಿ ನಮೂದಿಸಿದ್ದು, ಈ ಪತ್ರವನ್ನು ಅಬಕಾರಿ ನಿರೀಕ್ಷಕರು, ಗೌರಿಬಿದನೂರು ವಲಯ ಇವರ ದಿನಾಂಕ:25/04/2012 ರ ಪತ್ರದಲ್ಲಿ ಅಡಕವಿರಿಸಿ ಬೆಂಗಳೂರುನಲ್ಲಿರುವ " ಡಿನ್ನರ್ ಮೈನ್ ರೋಡ್ " ನಗರ ಪ್ರದೇಶವಾಗಿದ್ದು, ಇಲ್ಲಿ ಮಾಲೀಕರ ಮನೆ ನಂಬರ್ ಮತ್ತು ಕಟ್ಟಡದ ವಿಳಾಸ ಸರಿಯಾಗಿ ಇಲ್ಲದೇ ಇದಲ್ಲಿ ಅಂತಹ ವಿಳಾಸವನ್ನು ಪತ್ತೆ ಮಾಡಲು ಸಾಧ್ಯವಾಗಿರುವುದಿಲ್ಲ. ಅಲ್ಲದೇ ವಾಹನ ಜಪ್ತಾಗಿ ಸುಮಾರು 3 ತಿಂಗಳು ಕಳೆದರೂ ವಲಯ ಕಛೇರಿಗೆ ವಾಹನದ ಬಗ್ಗೆ ಹಕ್ಕು ಚಲಾಯಿಸಿ ಮೂಲ ದಾಖಲಾತಿಗಳೊಂದಿಗೆ ಯಾರೂ ಹಾಜರಾಗಿರುವುದಿಲ್ಲ. ಆದಕಾರಣ ವಾಹನವನ್ನು ಹೀಗೆ ಉಳಿಸಿಕೊಂಡಲ್ಲಿ ಅದರ ಮೌಲ್ಯ ಕಡಿಮೆಯಾಗಿ ಸರ್ಕಾರದ ರಾಜಸ್ವಕ್ಕೆ ದಕ್ಕೆಯಾಗುತ್ತದೆ. ಆದಕಾರಣ ವಾರಸುದಾರರು ಬಾರದೇ ಇರುವುದರಿಂದ ಸದರಿ ಟಿವಿಎಸ್ ಎಕ್ಸ್‌ಎಲ್ ಹೆವಿಡ್ಯುಟಿ ನೊಂದಣಿ ಸಂ:ಕೆಎ–04 ಇಎನ್–7174 ರ ದ್ವಿಚಕ್ರ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಶಿಫಾರಸ್ಸು ಮಾಡಿರುತ್ತಾರೆ.

ದಿನಾಂಕ:27/04/2012 ರಂದು ಪ್ರಕರಣವನ್ನು ಪ್ರಾಧಿಕಾರದಲ್ಲಿ ವಿಚಾರಣೆಗೆ ತೆಗೆದುಕೊಳ್ಳಲಾಗಿ ವಾಹನ ಮಾಲೀಕತ್ವ ಹೊಂದಿರುವವರು ಈ ಪ್ರಾಧಿಕಾರದ ಮುಂದೆ ಇಲ್ಲಿಯತನಕ ಯಾರೂ ಹಾಜರಾಗಿರುವುದಿಲ್ಲ. ದಾಖಲೆಗಳು, ಪ್ರ.ಮಾ.ವ. ಮಹಜರ್‌ನ್ನು ಪರಿಶೀಲಿಸಲಾಗಿ ಆರಕ್ಷಕ ನಿರೀಕ್ಷಕರು, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ, ಚಿಕ್ಕಬಳ್ಳಾಪುರ ಇವರು ದಿನಾಂಕ:05/02/2012 ರಂದು ಗೌರಿ ಗೌರಿಬಿದನೂರು ತಾಲ್ಲೂಕು ಜಗರೆಡ್ಡಿಹಳ್ಳಿ–ಮೇಳ್ಯ ರಸ್ತೆಯಲ್ಲಿ ರಸ್ತೆಯಲ್ಲಿ ರಸ್ತೆಕಾವಲು ಮಾಡುತ್ತಿದ್ದಾಗ ಟಿವಿಎಸ್ ಎಕ್ಸ್‌ಎಲ್ ಹೆವಿಡ್ಯುಟಿ ನೊಂದಣಿ ಸಂ:ಕೆಎ–04 ಇಎನ್–7174 ರ ದ್ವಿಚಕ್ರ ವಾಹನದಲ್ಲಿ 30 ಲೀ. ಸೇಂದಿಯನ್ನು ಹೊಂದಿ ಸಾಗಾಣಿಕೆ ಮಾಡುವ ಸಮಯದಲ್ಲಿ ಜಪ್ತುಪಡಿಸಿರುವುದು ಸಾಬೀತಾಗಿರುತ್ತದೆ. ಅಲ್ಲದೆ ರಾಸಾಯನಿಕ ತಜ್ಞರ ವರದಿಯನ್ವಯ ಜಪ್ತುಪಡಿಸಿರುವ ಸೇಂದಿಯಲ್ಲಿ ಈಥೈಲ್ ಆಲ್ಕೋಹಾಲ್ ಮತ್ತು ಕ್ಲೋರೈಡ್ ಅಂಶ ಕಂಡು ಬಂದಿರುವುದರಿಂದ ಈ ವಾಹನವನ್ನು ಅಬಕಾರಿ ವಸ್ತುಗಳ ಅಕ್ರಮ ಸಾಗಾಣಿಕೆಗೆ ಉಪಯೋಗಿಸಿರುವುದು ಸಾಬೀತಾಗಿರುತ್ತದೆ ಆದುದರಿಂದ ಈ ಕೆಳಗಿನಂತೆ ಆದೇಶ.

## ಆದೇಶ

ಎನ್. ಚಂದ್ರಶೇಖರ, ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು, ಚಿಕ್ಕಬಳ್ಳಾಪುರ ಜಿಲ್ಲೆ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಕಲಂ 43(ಬಿ) ಅಡಿ ಕ್ರಮ ಜರುಗಿಸಲಾಗಿದ್ದು, ಆರಕ್ಷಕ ನಿರೀಕ್ಷಕರು, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ, ಚಿಕ್ಕಬಳ್ಳಾಪುರ ರವರ ದಿನಾಂಕ:05/02/2012 ರ ಪ್ರ.ಮಾ.ವ.ಸಂಖ್ಯೆ 19/2012 ರಲ್ಲಿ ಜಪ್ತುಪಡಿಸಿರುವ ಟಿವಿಎಸ್ ಎಕ್ಸ್‌ಎಲ್ ಹೆವಿಡ್ಯುಟಿ ನೊಂದಣಿ ಸಂ:ಕೆಎ–04 ಇಎನ್–7174 ರ ಇಂಜಿನ್ ನಂ:ಒಡಿ1ಎ61604527, ಚಾಸೀಸ್ ನಂ:ಎಂಡಿ621ಬಿಡಿ1662ಎ87951 ರ ದ್ವಿಚಕ್ರ ವಾಹನವನ್ನು ವಾರಸ್ಸುದಾರರಿಲ್ಲದ ವಾಹನವೆಂದು ಪರಿಗಣಿಸಿ ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಸಿ) ಅಡಿಯಲ್ಲಿ ಕರ್ನಾಟಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ವಾಹನಕ್ಕೆ ಸಂಬಂಧಿಸಿದಂತೆ ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸುವುದಾದಲ್ಲಿ ಈ ಆದೇಶ ಹೊರಡಿಸಿದ ದಿನಾಂಕದಿಂದ 30 ದಿವಸಗಳೊಳಗೆ ಸಲ್ಲಿಸಬಹುದಾಗಿದೆ. ತಪ್ಪಿದ್ದಲ್ಲಿ ಇದೇ ಅಂತಿಮ ಆದೇಶವಾಗಿ ಊರ್ಜಿತಗೊಳ್ಳುತ್ತದೆ.

ಈ ಆದೇಶವನ್ನು ದಿನಾಂಕ:25/05/2012 ರಂದು ಈ ಪ್ರಾಧಿಕಾರದ ಮೊಹರಿನೊಂದಿಗೆ ಹೊರಡಿಸಿರುತ್ತೇನೆ. ಮೇಲ್ಮನವಿ ಅವಧಿ ಮುಗಿದ ನಂತರ ಕಾನೂನು ರೀತ್ಯಾ ಮೇಲ್ಕಂಡ ವಾಹನವನ್ನು ವಿಲೇವಾರಿ ಮಾಡಲು ಆದೇಶಿಸಿದೆ.

**ಎನ್. ಚಂದ್ರಶೇಖರ,**
ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು,
ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ.

**ಪಿ.ಆರ್. 864**

## ಚಿಂತಾಮಣಿ ತಾಲ್ಲೂಕು ವ್ಯಾಪ್ತಿಯ ಅಧಿ ಸೂಚಿತ ಸಂಸ್ಥೆಗಳ ಸ್ಥಿರಾಸ್ತಿ ವಿವರಗಳು

| ಕ್ರ.ಸಂ | ದೇವಾಲಯದ ಹೆಸರು / ಗ್ರಾಮ | ದೇವಾಲಯದ ಆಸ್ತಿ ಇರುವ ಸ್ಥಳ | ಸರ್ವೆ ನಂ | ವಿಸ್ತೀರ್ಣ (ಎ. ಗುಂಟೆ) | ಚೆಕ್ಕುಬಂದಿ | |
|---|---|---|---|---|---|---|
| 213 | ಶ್ರೀ ಲಕ್ಷ್ಮೀನರಸಿಂಹ ಸ್ವಾಮಿ ಕೋಟಗಲ್, ಮಜರಾ ಶಿಂಗರೇಪಲ್ಲಿ | ಕೋಟಗಲ್, ಮಜರಾ ಶಿಂಗರೇಪಲ್ಲಿ | ಸರ್ವೆ ನಂ 54 | 00–31 | ಪೂರ್ವ | ರಸ್ತೆ |
| | | | | | ಪಶ್ಚಿಮ | ಸರ್ವೆ ನಂ. 54 |
| | | | | | ಉತ್ತರ | ಸರ್ವೆ ನಂ.54 ರ ಉಳಿಕೆ |
| | | | | | ದಕ್ಷಿಣ | ಸರ್ವೆ ನಂ.54 ರ ಉಳಿಕೆ |
| 214 | ಶ್ರೀ ಲಕ್ಷ್ಮೀನರಸಿಂಹ ಸ್ವಾಮಿ ತಿರುಮಲಾಪುರ | ತಿರುಮಲಾಪುರ | ಸರ್ವೆ ನಂ 8 | 02––00 | ಪೂರ್ವ | ಸರ್ವೆ ನಂ.8 ರ ಉಳಿಕೆ |
| | | | | | ಪಶ್ಚಿಮ | ಸರ್ವೆ ನಂ.8 ರ ಉಳಿಕೆ |
| | | | | | ಉತ್ತರ | ಸರ್ವೆ ನಂ.8 ರ ಉಳಿಕೆ |
| | | | | | ದಕ್ಷಿಣ | ಸರ್ವೆ ನಂ.8 ರ ಉಳಿಕೆ |
| | ಶ್ರೀ ಲಕ್ಷ್ಮೀನರಸಿಂಹ ಸ್ವಾಮಿ ಟಿ.ಗೊಲ್ಲಹಳ್ಳಿ | ಟಿ.ಗೊಲ್ಲಹಳ್ಳಿ | ಸರ್ವೆ ನಂ 63 | 1–00 | ಪೂರ್ವ | ಸರ್ವೆ ನಂ. 62 |
| | | | | | ಪಶ್ಚಿಮ | ಗ್ರಾಮ ಠಾಣ |
| | | | | | ಉತ್ತರ | ಸರ್ವೆ ನಂ. 62 |
| | | | | | ದಕ್ಷಿಣ | ಸರ್ವೆ ನಂ.64 ರ ಜಮೀನು |
| | ಶ್ರೀ ಲಕ್ಷ್ಮೀನರಸಿಂಹ ಸ್ವಾಮಿ ಗಡಿಗವಾರಪಲ್ಲಿ | ಗಡಿಗವಾರಪಲ್ಲಿ | ಸರ್ವೆ ನಂ 97 | 0––19 | ಪೂರ್ವ | ಸರ್ವೆ ನಂ. 100 |
| | | | | | ಪಶ್ಚಿಮ | ಸರ್ವೆ ನಂ.96 |
| | | | | | ಉತ್ತರ | ಸರ್ವೆ ನಂ.110 |
| | | | | | ದಕ್ಷಿಣ | ಸರ್ವೆ ನಂ.98 ರ ಜಮೀನು |
| 215 | ಶ್ರೀ ಸೋಮೇಶ್ವರ ಕೆಂದನಹಳ್ಳಿ | ಕೆಂದನಹಳ್ಳಿ | 132 | 1––39 | ಪೂರ್ವ | ಸರ್ವೆ ನಂ.131 ರ ಜಮೀನು |
| | | | | | ಪಶ್ಚಿಮ | ಸರ್ವೆ ನಂ.133ರ ಜಮೀನು |
| | | | | | ಉತ್ತರ | ಸರ್ವೆ ನಂ.134ರ ಜಮೀನು |
| | | | | | ದಕ್ಷಿಣ | ಸರ್ವೆ ನಂ. 7ರ ಜಮೀನು |

| ಕ್ರ.ಸಂ | ದೇವಾಲಯದ ಹೆಸರು / ಗ್ರಾಮ | ದೇವಾಲಯದ ಆಸ್ತಿ ಇರುವ ಸ್ಥಳ | ಸರ್ವೆ ನಂ | ವಿಸ್ತೀರ್ಣ (ಎ. ಗುಂಟೆ) | ಚೆಕ್ಕುಬಂದಿ | |
|---|---|---|---|---|---|---|
| 216 | ಶ್ರೀ ದುರ್ಗಮ್ಮ ಯಶವಂತಪುರ | ಯಶವಂತಪುರ | ಸರ್ವೆ ನಂ 8 | 0--4 | ಪೂರ್ವ | ಸರ್ವೆ ನಂ. 8ರ ಉಳಿಕೆ |
| | | | | | ಪಶ್ಚಿಮ | ಸರ್ವೆ ನಂ.8ರ ಉಳಿಕೆ |
| | | | | | ಉತ್ತರ | ಸರ್ವೆ ನಂ.8ರ ಉಳಿಕೆ |
| | | | | | ದಕ್ಷಿಣ | ಸರ್ವೆ ನಂ.8ರ ಉಳಿಕೆ |
| 217 | ಶ್ರೀ ಆಂಜನೇಯಸ್ವಾಮಿ ಚಾಂದ್ರಹಳ್ಳಿ | ಚಾಂದ್ರಹಳ್ಳಿ | ಗ್ರಾಮ ಠಾಣ | 0--1/2 | ಪೂರ್ವ | ಸರ್ಕಾರಿ ಪಶುವೈದ್ಯ ಶಾಲೆ |
| | | | | | ಪಶ್ಚಿಮ | ರಸ್ತೆ |
| | | | | | ಉತ್ತರ | ಸರ್ಕಾರಿ ಪಶುವೈದ್ಯ ಶಾಲೆ |
| | | | | | ದಕ್ಷಿಣ | ಸರ್ಕಾರಿ ಪಶುವೈದ್ಯ ಶಾಲೆ |
| 218 | ಶ್ರೀ ಆಂಜನೇಯಸ್ವಾಮಿ ಕೋಟಗಲ್ | ಕೋಟಗಲ್ | ಗ್ರಾಮ ಠಾಣ | 0—3 ಗುಂಟೆ | ಪೂರ್ವ | ಅಂಗನವಾಡಿ ಕೇಂದ್ರ ಖಾ. ನಂ. 44 |
| | | | | | ಪಶ್ಚಿಮ | ರಸ್ತೆ ಮತ್ತು ಸ.ಪ್ರಾ. ಪಾಠಶಾಲೆ |
| | | | | | ಉತ್ತರ | ಮನೆ ನಂ.36 ಮತ್ತು 39 |
| | | | | | ದಕ್ಷಿಣ | ಮನೆ ನಂ. 58. |
| | ಶ್ರೀ ಆಂಜನೇಯಸ್ವಾಮಿ ಕೋಟಗಲ್ | ಕೋಟಗಲ್ | ಸರ್ವೆ ನಂ 85 | 0--36 | ಪೂರ್ವ | ಸರ್ವೆ ನಂ.83 ರ ಜಮೀನು |
| | | | | | ಪಶ್ಚಿಮ | ಸರ್ವೆ ನಂ.86 ರ ಜಮೀನು |
| | | | | | ಉತ್ತರ | ಸರ್ವೆ ನಂ.49 ರ ಜಮೀನು |
| | | | | | ದಕ್ಷಿಣ | ಸರ್ವೆ ನಂ.84 ರ ಜಮೀನು |
| | ಶ್ರೀ ಆಂಜನೇಯಸ್ವಾಮಿ ತಿಪ್ಪನಹಳ್ಳಿ | ತಿಪ್ಪನಹಳ್ಳಿ | ಸರ್ವೆ ನಂ 64 | 0--6 | ಪೂರ್ವ | ಸರ್ವೆ ನಂ.66 ರ ಜಮೀನು |
| | | | | | ಪಶ್ಚಿಮ | ಸರ್ವೆ ನಂ.63 ರ ಜಮೀನು |
| | | | | | ಉತ್ತರ | ಸರ್ವೆ ನಂ.65 ರ ಜಮೀನು |
| | | | | | ದಕ್ಷಿಣ | ಸರ್ವೆ ನಂ.1 ರ ಜಮೀನು |

| ಕ್ರ.ಸಂ | ದೇವಾಲಯದ ಹೆಸರು / ಗ್ರಾಮ | ದೇವಾಲಯದ ಆಸ್ತಿ ಇರುವ ಸ್ಥಳ | ಸರ್ವೆ ನಂ | ವಿಸ್ತೀರ್ಣ (ಎ. ಗುಂಟೆ) | ಚೆಕ್ಕುಬಂದಿ | |
|---|---|---|---|---|---|---|
| 219 | ಶ್ರೀ ಬಸವೇಶ್ವರಸ್ವಾಮಿ ಮಲ್ಲಿಕಾರ್ಜುನ ಪುರ | ಮಲ್ಲಿಕಾರ್ಜುನಪುರ | ಸರ್ವೆ ನಂ 2, 3 ಮತ್ತು 4 | 0--2 3/4 | ಪೂರ್ವ | ಸರ್ವೆ ನಂ. 3 ಮತ್ತು 4 |
| | | | | | ಪಶ್ಚಿಮ | ಸರ್ವೆ ನಂ. 2 ಮತ್ತು 4 |
| | | | | | ಉತ್ತರ | ಸರ್ವೆ ನಂ. 4 |
| | | | | | ದಕ್ಷಿಣ | ಸರ್ವೆ ನಂ. 2 ಮತ್ತು 4 |
| 220 | ಶ್ರೀ ಗೋಪಾಲಸ್ವಾಮಿ ಕಿರಿ ಕೇರಿ ಗೋಪಾಲಪುರ | ಕಿರಿ ಕೇರಿ ಗೋಪಾಲಪುರ | ಗ್ರಾಮ ಠಾಣ | 0--6 | ಪೂರ್ವ | ಗ್ರಾಮ ಠಾಣ |
| | | | | | ಪಶ್ಚಿಮ | ಸರ್ವೆ ನಂ.94 & 95ರ ಜಮೀನು |
| | | | | | ಉತ್ತರ | ಗ್ರಾಮ ಠಾಣ |
| | | | | | ದಕ್ಷಿಣ | ಗ್ರಾಮ ಠಾಣ |
| 221 | ಶ್ರೀ ತಿರುಮಲ ದೇವರು ಕುರುಮಾರ್ಲಹಳ್ಳಿ | ಕುರುಮಾರ್ಲಹಳ್ಳಿ | ಗ್ರಾಮ ಠಾಣ | 0--1 | ಪೂರ್ವ | ಸರ್ವೆ ನಂ.99, ಖಾಲಿ ನಿವೇಶನ |
| | | | | | ಪಶ್ಚಿಮ | ಸುಜ್ಜನಹಳ್ಳಿಯಿಂದ ದೊಡ್ಡಿಹಳ್ಳಿಗೆ ರಸ್ತೆ |
| | | | | | ಉತ್ತರ | ರಸ್ತೆ ಮತ್ತು ಸರ್ವೆ ನಂ.1 |
| | | | | | ದಕ್ಷಿಣ | ವೆಂಕಟಸುಬ್ಬನ್ನರವರ ಮನೆ ಖಾ.ಸಂ.99 |
| | ಶ್ರೀ ತಿರುಮಲ ದೇವರು ಕುರುಮಾರ್ಲಹಳ್ಳಿ | ಕುರುಮಾರ್ಲಹಳ್ಳಿ | 5 ರ ಬಾಬ್ತು | 0--38 | ಪೂರ್ವ | ಸರ್ವೆ ನಂ.4 ರ ಜಮೀನು |
| | | | | | ಪಶ್ಚಿಮ | ಸರ್ವೆ ನಂ.6 ರ ಜಮೀನು |
| | | | | | ಉತ್ತರ | ಸರ್ವೆ ನಂ.8 ರ ಜಮೀನು |
| | | | | | ದಕ್ಷಿಣ | ಸರ್ವೆ ನಂ.1 ಮತ್ತು ಗ್ರಾಮಠಾಣ |
| | ಶ್ರೀ ತಿರುಮಲ ದೇವರು ಕುರುಮಾರ್ಲಹಳ್ಳಿ | ಕುರುಮಾರ್ಲಹಳ್ಳಿ | ಸರ್ವೆ ನಂ 30 | 0--09 | ಪೂರ್ವ | ಸರ್ವೆ ನಂ.29ರ ಜಮೀನು |
| | | | | | ಪಶ್ಚಿಮ | ಸರ್ವೆ ನಂ.32ರ ಜಮೀನು |
| | | | | | ಉತ್ತರ | ಸರ್ವೆ ನಂ.29ರ ಜಮೀನು |
| | | | | | ದಕ್ಷಿಣ | ಸರ್ವೆ ನಂ.31ರ ಜಮೀನು |
| 222 | ಶ್ರೀ ಆಂಜನೇಯಸ್ವಾಮಿ ದೊಡ್ಡಿಹಳ್ಳಿ | ದೊಡ್ಡಿಹಳ್ಳಿ | ಸರ್ವೆ ನಂ 3 | 0--1 1/2 | ಪೂರ್ವ | ಸರ್ವೆ ನಂ.4ರ ಜಮೀನು |
| | | | | | ಪಶ್ಚಿಮ | ಸರ್ವೆ ನಂ.3ರ ಉಳಿಕೆ |
| | | | | | ಉತ್ತರ | ಸರ್ವೆ ನಂ.3ರ ಉಳಿಕೆ |
| | | | | | ದಕ್ಷಿಣ | ಸರ್ವೆ ನಂ.3ರ ಉಳಿಕೆ |

| ಕ್ರ.ಸಂ | ದೇವಾಲಯದ ಹೆಸರು / ಗ್ರಾಮ | ದೇವಾಲಯದ ಆಸ್ತಿ ಇರುವ ಸ್ಥಳ | ಸರ್ವೆ ನಂ | ವಿಸ್ತೀರ್ಣ (ಎ. ಗುಂಟೆ) | ಚೆಕ್ಕುಬಂದಿ | |
|---|---|---|---|---|---|---|
| 223 | ಮಖಾನ್ ಬಾಬ್ತು ಕೊತ್ತೂರು | ಕೊತ್ತೂರು | ಸರ್ವೆ ನಂ 58/4 | 0–2 3/4 | ಪೂರ್ವ | ಸರ್ವೆ ನಂ.58/4ರ ಉಳಿಕೆ |
| | | | | | ಪಶ್ಚಿಮ | ಸರ್ವೆ ನಂ.58/4ರ ಉಳಿಕೆ |
| | | | | | ಉತ್ತರ | ಸರ್ವೆ ನಂ.58/4ರ ಉಳಿಕೆ |
| | | | | | ದಕ್ಷಿಣ | ಸರ್ವೆ ನಂ.58/4ರ ಉಳಿಕೆ |
| 224 | ಶ್ರೀ ಗೋಪಾಲಸ್ವಾಮಿ ಮಾದರಕಲ್ಲು | ಮಾದರಕಲ್ಲು | ಸರ್ವೆ ನಂ 2/1 | 0––4 | ಪೂರ್ವ | ಸರ್ಕಾರಿ ಓಣಿ |
| | | | | | ಪಶ್ಚಿಮ | ಸರ್ವೆ ನಂ. 1/1 ರ ಜಮೀನು |
| | | | | | ಉತ್ತರ | ಸರ್ವೆ ನಂ. 1/1 ರ ಜಮೀನು |
| | | | | | ದಕ್ಷಿಣ | ರಸ್ತೆ |
| 225 | ಶ್ರೀ ಕರಗದಮ್ಮ ದೇವರು ಹಿರೇಕಟ್ಟಿಗೇನಹಳ್ಳಿ | ಹಿರೇಕಟ್ಟಿಗೇನಹಳ್ಳಿ | ಸರ್ವೆ ನಂ 117 | 0––3 | ಪೂರ್ವ | ಸರ್ವೆ ನಂ.117ರ ಉಳಿಕೆ |
| | | | | | ಪಶ್ಚಿಮ | ಸರ್ವೆ ನಂ.117ರ ಉಳಿಕೆ |
| | | | | | ಉತ್ತರ | ಸರ್ವೆ ನಂ.117ರ ಉಳಿಕೆ |
| | | | | | ದಕ್ಷಿಣ | ಸರ್ವೆ ನಂ.117ರ ಉಳಿಕೆ |
| 226 | ಶ್ರೀ ಚೌಡೇಶ್ವರಿ ದೇವಾಲಯ ಹಿರೇಕಟ್ಟಿಗೇನಹಳ್ಳಿ | ಹಿರೇಕಟ್ಟಿಗೇನಹಳ್ಳಿ | ಸರ್ವೆ ನಂ 127/1 | 0––1 | ಪೂರ್ವ | ಸರ್ವೆ ನಂ.127/1ರ ಉಳಿಕೆ |
| | | | | | ಪಶ್ಚಿಮ | ಸರ್ವೆ ನಂ.127/1ರ ಉಳಿಕೆ |
| | | | | | ಉತ್ತರ | ಸರ್ವೆ ನಂ.127/1ರ ಉಳಿಕೆ |
| | | | | | ದಕ್ಷಿಣ | ಸರ್ವೆ ನಂ.127/1ರ ಉಳಿಕೆ |
| | ಶ್ರೀ ಚೌಡೇಶ್ವರಿ ದೇವಾಲಯ ಹಿರೇಕಟ್ಟಿಗೇನಹಳ್ಳಿ | ಹಿರೇಕಟ್ಟಿಗೇನಹಳ್ಳಿ | ಸರ್ವೆ ನಂ 64 | 0––9 | ಪೂರ್ವ | ಸರ್ವೆ ನಂ.63 ರ ಜಮೀನು |
| | | | | | ಪಶ್ಚಿಮ | ಸರ್ವೆ ನಂ.65 ರ ಜಮೀನು |
| | | | | | ಉತ್ತರ | ಸರ್ವೆ ನಂ.65 ರ ಜಮೀನು |
| | | | | | ದಕ್ಷಿಣ | ಸರ್ವೆ ನಂ.61ರ ಜಮೀನು |

ತಹಸೀಲ್ದಾರರು

ಪಿ.ಆರ್. 820 **ಚಿಂತಾಮಣಿ ತಾಲ್ಲೂಕು, ಚಿಂತಾಮಣಿ**

## URBAN DEVELOPMENT SECRETARIAT

**No.UDD/101/MNX/2012 Bangalore, dated: 12-07-2012.**

## NOTIFICATION

In exercise of the powers conferred by sub-section(1) of Section-48 of the Land Acquisition Act-1894 (Central Act-1894) the Government of Karnataka hereby withdrawn from the acquisition the lands specified below in respect of which the Preliminary Notification was published in the Karnataka Gazette dated: 03-02-2003 in Part-III at pages from 1 to 179 vide Notification No.BDA/COMMR/ALAO/ LA9/104/2002-03 dated:03-02-2003 and Final Notification No.UDD 193 MNX 2004 dated: 23-02-2004 was published in the Karnataka Gazette dated:23-02-2004 in Part-III under Sub-section(1) of Section-19 of BDA Act-1976 (Karnataka Act-12 of 1976) for formation of layout Called "ARKAVATHI LAYOUT'', to abide by the Hon'ble High Court Judgement in W.P.No. 7015-16/2005 (LA-BDA) dated 15-04-2005. & W.A.No. 2624/2005 dated 25-11-2005 subject to condition that the scheduled property shall not be disposed of for a period of one year from the date of issue of this Notification.

**SCHEDULE.**

**DISTRICT:BANGALORE** **TALUK:BANGALORE-EAST** **HOBLI: K.R.PURAM** **VILLAGE:RACHENAHALLI**

| SL. No. | Name of the Khatedar/Anubhavadar Sri/Smt. | Sy. No. | Dry/ Wet/ Garden | Total Extent | Kharab | Remaining Extent | Assessment | Extent Acquired | Extent with drawn | East Sy.No | West Sy. No | North Sy.No | South Sy.No |
|---|---|---|---|---|---|---|---|---|---|---|---|---|---|
| | | | | A-G | A-G | A-G | Rs.Ps. | A.G. | **A-G** | | | | |
| 1. | Arogyaswamy bin Yagappa | 87 | dry | 0-28 | 0-02 | 0-26 | 0-82 | 0-25 | **0-25** | 85 | Road | Road | 86 |
| Total Extent With drawn | | | | | | | | | **0-25** | | | | |

**TOTAL EXTENT WITH DRAWN 25 Guntas only (Twenty Five Guntas only)**

By Order and in the name of the Governor of Karnataka

**PR- 942**

**S.Chandrappa**
Under Secretary to Government
Urban Development Department.

**ಶಿಕ್ಷಣ ಸಚಿವಾಲಯ**

**ಅನುಬಂಧ–2**

**31–12–2011 ಅಂತ್ಯಕ್ಕೆ ಇದ್ದಂತೆ ಆಡಳಿತ ಅಧಿಕಾರಿಗಳ ವೃಂದದ ಅಂತಿಮ ಜೇಷ್ಠತಾ ಪಟ್ಟಿಗಾಗಿ ಮಾಹಿತಿ**

| ಕ್ರ. ಸಂ. | ಹೆಸರು | ನೇರ ನೇಮಕಾತಿ ಮುಂಬಡ್ತಿ ಇತರೆ | ಮೀಸಲಾತಿ ವರ್ಗ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಹೊಂದಿದ ದಿನಾಂಕ | ನೇಮಕಾತಿಗೆ ಜೇಷ್ಠತೆಗೆ ನೈಜವಾದ ಅರ್ಹತಾ ದಿನಾಂಕ | ಷರಾ |
|---|---|---|---|---|---|---|---|---|
| 1 | 2 | 3 | | 4 | 5 | 6 | 7 | 11 |
| | ಶ್ರೀಮತಿ/ಶ್ರೀ | | | | | | | |
| 1. | ಡಿ.ಆರ್. ಕೆಂಪಣ್ಣ | ಮುಂಬಡ್ತಿ | ಸಾಮಾನ್ಯ | 20–05–1932 | 15–03–1968 | – | ಜೂನ್–1981 | ದಿ:31–05–90 ರಂದು ನಿವೃತ್ತಿ ಹೊಂದಿರುತ್ತಾರೆ |
| 2. | ಐರಿನ್ ಲೋಬೋ | ಮುಂಬಡ್ತಿ | ಸಾಮಾನ್ಯ | 03–12–1933 | 15–01–1969 | – | ಜೂನ್–1981 | ದಿ: 31–12–92 ರಂದು ನಿವೃತ್ತಿ ಹೊಂದಿರುತ್ತಾರೆ |
| 3. | ಕೆ.ಎಸ್. ಪ್ರಭಾವತಿ | ಮುಂಬಡ್ತಿ | ಸಾಮಾನ್ಯ | 20–10–1942 | 27–07–1969 | – | 23–01–1992 | ದಿ:31–10–2000 ರಂದು ನಿವೃತ್ತಿ. |
| 4. | ಎಸ್.ಎನ್. ವಿಜಯಲಕ್ಷ್ಮಿ | ಮುಂಬಡ್ತಿ | ಸಾಮಾನ್ಯ | 18–05–1943 | 25–04–1969 | – | – | ನಿವೃತ್ತಿ ಹೊಂದಿರುತ್ತಾರೆ (ನಿವೃತ್ತಿ ನಂತರ ಪೂರ್ವಭಾವಿಯಾಗಿ ಬಡ್ತಿ ನೀಡಲಾಗಿದೆ. |
| 5. | ಬಸವಲಿಂಗು | ಮುಂಬಡ್ತಿ | ಪ.ಜಾತಿ | 04–07–1946 | 13–02–1969 | – | 01–01–1993 | ನಿವೃತ್ತಿ ಹೊಂದಿರುತ್ತಾರೆ |
| 6. | ಪಿ.ಬಿ. ಜೋಡಳ್ಳಿ | ಮುಂಬಡ್ತಿ | ಸಾಮಾನ್ಯ | 10–02–1945 | 11–05–1973 | – | – | ನಿವೃತ್ತಿ ಹೊಂದಿರುತ್ತಾರೆ |
| 7. | ವಾನ್‌ಖೇಡೆ ಇಸ್ಮಾಯಿಲ್ | ಮುಂಬಡ್ತಿ | ಪ.ಜಾತಿ | 01–06–1950 | 10–02–1984 | – | 22–09–2004 | ಅಧೀಕ್ಷಕರ ಹುದ್ದೆಯಿಂದ ಬಡ್ತಿ ಹೊಂದಿರುತ್ತಾರೆ. ನಿವೃತ್ತಿ |
| 8. | ವೆಂಕೋಬಾಚಾರ್ | ಮುಂಬಡ್ತಿ | ಸಾಮಾನ್ಯ | 01–07–1951 | 30–04–1973 | | | ಅಧೀಕ್ಷಕರ ಹುದ್ದೆಯಿಂದ ಬಡ್ತಿ ಹೊಂದಿರುತ್ತಾರೆ. ನಿವೃತ್ತಿ |
| 9. | ಎಸ್.ಎಸ್. ಭೂಸನೂರ | ಮುಂಬಡ್ತಿ | ಸಾಮಾನ್ಯ | 01–07–1954 | 10–08–1980 | 30–05–09 | 30–05–09 | ಅಧೀಕ್ಷಕರ ಹುದ್ದೆಯಿಂದ ಬಡ್ತಿ ಹೊಂದಿರುತ್ತಾರೆ |
| 10. | ಹೆಚ್. ರುದ್ರಪ್ಪ | ಮುಂಬಡ್ತಿ | ಪ.ಜಾತಿ | 01–07–1953 | 17–08–1975 | 18–07–11 | 18–07–11 | ಅಧೀಕ್ಷಕರ ಹುದ್ದೆಯಿಂದ ಬಡ್ತಿ ಹೊಂದಿರುತ್ತಾರೆ |

**ಎಸ್.ಬಿ. ಪಟಗಾರ್**
ಸರ್ಕಾರದ ಅಧೀನ ಕಾರ್ಯದರ್ಶಿ (ಸಾಮಾನ್ಯ)
(ಪ್ರಾರ್ಥಮಿಕ ಮತ್ತು ಪ್ರೌಢ ಶಿಕ್ಷಣ)
ಶಿಕ್ಷಣ ಇಲಾಖೆ, ಬೆಂಗಳೂರು

**ಪಿ.ಆರ್. 853**

## ಆಯುಕ್ತರು ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ ಬೆಂಗಳೂರು ಇವರ ನಡೆವಳಿ.

**ಸಂ: ಸಿಬ್ಬಂದಿ.ಶಿಸ್ತು 17/2011–12, ದಿನಾಂಕ: 3.5.2012.**

**ವಿಷಯ:** ಶ್ರೀ ಜೆ. ತ್ಯಾಗರಾಜು, ಭೂಮಾಪಕರು, ತಹಸೀಲ್ದಾರ್ ಕಛೇರಿ, ಶಿಕಾರಿಪುರ ಇವರ ವಿರುದ್ದದ ಶಿಸ್ತು ಕ್ರಮ– ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಉಲ್ಲೇಖ:**
1. ಜಿಲ್ಲಾಧಿಕಾರಿಗಳು, ಶಿವಮೊಗ್ಗ ಇವರ ಕಾರಣ ಕೇಳಿ ನೋಟಿಸು (ದೋಷಾರೋಪಣೆ ಪಟ್ಟಿಯೊಂದಿಗೆ) ಸಂ: ಸಿಬ್ಬಂದಿ(2) ಸಿಸಿಎ 19/2009–10 ದಿನಾಂಕ: 17.08.2009.
2. ವಿಚಾರಣಾಧಿಕಾರಿಯನ್ನು ನೇಮಕ ಮಾಡಿದ ಜಿಲ್ಲಾಧಿಕಾರಿಗಳು, ಶಿವಮೊಗ್ಗ ಇವರ ನಡೆವಳಿ ಸಂ: ಇಎಸ್‌ಟಿ(2) ಸಿಸಿಎ 19/2009–10 ದಿನಾಂಕ: 10.11.2009.
3. ವಿಚಾರಣಾಧಿಕಾರಿಗಳು ಹಾಗೂ ಜಿಲ್ಲಾ ಯೋಜನಾ ಸಮನ್ವಯಾಧಿಕಾರಿಗಳು, ಜಲ ಸಂವರ್ಧನೆ ಯೋಜನಾ ಸಂಘ, ಶಿವಮೊಗ್ಗ ಇವರ ವಿಚಾರಣಾ ವರದಿ ಸಂ: ಜೆಎಸ್‌ವೈಎಸ್.ಡಿಪಿಯು.ಶಿ/ಆಡಳಿತ/438/10–11 ದಿನಾಂಕ: –ಇಲ್ಲ–
4. ಜಿಲ್ಲಾಧಿಕಾರಿಗಳು, ಶಿವಮೊಗ್ಗ ಇವರ ಪತ್ರ ಸಂ; ಇಎಸ್‌ಟಿ(2) ಸಿಸಿಎ 19/2009–10 ದಿನಾಂಕ: 4.7.2011.
5. ಈ ಕಛೇರಿ ಸಮಸಂಖ್ಯೆಯ 2ನೇ ಕಾರಣ ಕೇಳಿ ನೋಟೀಸು ದಿನಾಂಕ: 30.08.2011 /02.09.2011.

**ಪ್ರಸ್ತಾವನೆ:**

ಶ್ರೀ ಜೆ.ತ್ಯಾಗರಾಜು, ಭೂಮಾಪಕರು, ತಹಸೀಲ್ದಾರ್ ಕಛೇರಿ, ಶಿಕಾರಿಪುರ ಆದ ಇವರು ಈ ಹಿಂದೆ ತಹಸೀಲ್ದಾರ್, ಶಿಕಾರಿಪುರ ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಎಸಗಿರುವ ಕರ್ತವ್ಯಲೋಪಗಳ ಕುರಿತು, ಜಿಲ್ಲಾಧಿಕಾರಿಗಳು, ಶಿವಮೊಗ್ಗ ರವರು ದೋಷಾರೋಪಣೆ ಪಟ್ಟಿಯನ್ನು ಕಾರಣ ಕೇಳಿ ನೋಟೀಸಿನೊಂದಿಗೆ ದಿನಾಂಕ: 17.08.2009 ರಂದು ಜಾರಿ ಮಾಡಿರುತ್ತಾರೆ. ನೌಕರರುಗಳ ವಿರುದ್ಧ ಮಾಡಿರುವ ಆರೋಪಗಳನ್ನು ಈ ಕೆಳಕಂಡಂತೆ ಪುನರುಚ್ಚರಿಸಿದೆ.

**ಆರೋಪ–1:**

ಶ್ರೀ ಜೆ.ತ್ಯಾಗರಾಜ್, ದ್ವಿತೀಯ ದರ್ಜೆ ಭೂಮಾಪಕರು, ತಾಲ್ಲೂಕು ಕಛೇರಿ, ಶಿಕಾರಿಪುರ ಆದ ನೀವು ದಿನಾಂಕ: 01.07.2008 ರಿಂದ ದಿನಾಂಕ: 24.10.2008 ರವರೆಗೆ ಭೂಮಾಪನ ಶಾಖೆಯ ಅಭಿಲೇಖಾಲಯದಲ್ಲಿ ವಿಷಯನಿರ್ವಾಹಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದು, ಅಂದಿನಿಂದ ಕರ್ತವ್ಯ ಬಿಡುಗಡೆಯಾಗುವವರೆಗೂ ಸಾರ್ವಜನಿಕರಿಂದ ವಸೂಲಾದ ಹಣವನ್ನು ಸರಿಯಾಗಿ ಸರ್ಕಾರಕ್ಕೆ ಜಮಾ ಮಾಡದೇ ತಾತ್ಕಾಲಿಕ ದುರುಪಯೋಗಪಡಿಸಿಕೊಂಡಿರುತ್ತೀರಿ. ಸರ್ಕಾರಿ ಹಣ ಜಮಾ ಮಾಡುವ ವಹಿಯಲ್ಲಿ ಮೇಲಾಧಿಕಾರಿಗಳ ಸಹಿ ಮಾಡಬೇಕಾದ ಸ್ಥಳದಲ್ಲಿ ನೀವೇ ಸಹಿ ಮಾಡಿರುತ್ತೀರಿ. ಇದು ಅಧಿಕಾರ ದುರುಪಯೋಗವಾಗಿರುತ್ತದೆ ಹಾಗು ನೌಕರರಿಗೆ ತರವಲ್ಲದ ನಡವಳಿಕೆಯಾಗಿದ್ದು, ಇದರಿಂದಾಗಿ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮ 1, 2, 3 ನ್ನು ಹಾಗೂ ಕರ್ನಾಟಕ ಆರ್ಥಿಕ ಸಂಹಿತೆ ನಿಯಮ ಉಲ್ಲಂಘಿಸಿರುವುದರಿಂದಾಗಿ ಈ ದೋಷಾರೋಪಣೆ.

**ಆರೋಪ–2:**

ಶ್ರೀ ಜೆ.ತ್ಯಾಗರಾಜ್, ದ್ವಿತೀಯ ದರ್ಜೆ ಭೂಮಾಪಕರು, ತಾಲ್ಲೂಕು ಕಛೇರಿ, ಶಿಕಾರಿಪುರ ಆದ ನೀವು ದಿನಾಂಕ: 01.07.2008 ರಿಂದ ದಿನಾಂಕ: 24.10.2008 ರವರೆಗೆ ಭೂಮಾಪನ ಶಾಖೆಯ ಅಭಿಲೇಖಾಲಯದಲ್ಲಿ ವಿಷಯನಿರ್ವಾಹಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದು, ಪರವಾನಗಿ ಭೂಮಾಪಕರ ಅಳತೆಗಾಗಿ ಸಾರ್ವಜನಿಕರಿಂದ 11ಇ ನಕ್ಷೆಗಾಗಿ ಅರ್ಜಿಗಳು ಬಂದಿದ್ದು, ನಿಗದಿತ ವಹಿಯಲ್ಲಿ ಸರಿಯಾಗಿ ನಮೂದು ಮಾಡಿರುವುದಿಲ್ಲ. ಹಾಲಿ ವಹಿಯನ್ನು ಪರಿಶೀಲಿಸಲಾಗಿ ದಿನಾಂಕ: 01.07.2008 ರಿಂದ 24.10.2008 ರವರೆಗೆ ನೀವು ಅಭಿಲೇಖಾಲಯ ಶಾಖೆಯಲ್ಲಿ ಇರುವಾಗ 11ಇ ನಕ್ಷೆಯ ಒಟ್ಟು 340 ಅರ್ಜಿಗಳ ಬಾಬ್ತು ಒಟ್ಟು ಮೊಬಲಗು ರೂ. 1,02,000=00 ಆಗಿದ್ದು, ಈ ಹಣವನ್ನು ಮೇಲಾಧಿಕಾರಿಗಳಿಗೆ ಹಸ್ತಾಂತರಿಸದೆ ಅಥವಾ ಪರವಾನಗಿ ಭೂಮಾಪಕರಿಗೆ ವಿತರಿಸದೇ ನೀವೇ ದುರುಪಯೋಗ ಮಾಡಿಕೊಂಡಿರುತ್ತೀರಿ. ಈ ಬಗ್ಗೆ ಸರಿಯಾದ ಲೆಕ್ಕಪತ್ರ ಇಟ್ಟಿರುವುದಿಲ್ಲ. ಇದು ಸರ್ಕಾರಿ ನೌಕರರಿಗೆ ತರವಲ್ಲದ ನಡುವಳಿಕೆಯಾಗಿದ್ದು, ಇದರಿಂದಾಗಿ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮ 1, 2 3,ನ್ನು ಉಲ್ಲಂಘಿಸಿರುವುದರಿಂದಾಗಿ ಈ ದೋಷಾರೋಪಣೆ.

**ಆರೋಪ–3:**

ಶ್ರೀ ಜೆ.ತ್ಯಾಗರಾಜ್, ದ್ವಿತೀಯ ದರ್ಜೆ ಭೂಮಾಪಕರು, ತಾಲ್ಲೂಕು ಕಛೇರಿ, ಶಿಕಾರಿಪುರ ಆದ ನೀವು ದಿನಾಂಕ: 01.07.2008 ರಿಂದ ದಿನಾಂಕ: 24.10.2008 ರವರೆಗೆ ಭೂಮಾಪನ ಶಾಖೆಯ ಅಭಿಲೇಖಾಲಯದಲ್ಲಿ ವಿಷಯನಿರ್ವಾಹಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದ ಸಮಯದಲ್ಲಿ, ಅರ್ಜಿದಾರರಿಗೆ ಸರಿಯಾಗಿ ನಕಲು ವಿತರಿಸದೇ ಅರ್ಜಿದಾರರ ಹತ್ತಿರ ಹೆಚ್ಚಾಗಿ ಮೊಬಲಗು ಪಡೆದು ನಿಗದಿತ ಅವಧಿಯಲ್ಲಿ ನಕಲು ಕೊಡದೇ

ಸಾರ್ವಜನಿಕರಿಗೆ ತೊಂದರೆಯನ್ನುಂಟು ಮಾಡಿ ಕರ್ತವ್ಯಲೋಪವೆಸಗಿರುತ್ತೀರಿ. ಇದರಿಂದಾಗಿ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮ 1, 2, 3ನ್ನು ಉಲ್ಲಂಘಿಸಿರುವುದರಿಂದ ಈ ದೊಷಾರೋಪಣೆ.

ಸದರಿ ಕಾರಣ ಕೇಳಿ ನೋಟೀಸನ್ನು ದೋಷಾರೋಪಣೆ ಪಟ್ಟಿಯೊಂದಿಗೆ ದಿನಾಂಕ: 20.08.2009 ರಂದು ಶ್ರೀ ಜೆ.ತ್ಯಾಗರಾಜ್, ಭೂಮಾಪಕರು, ಸ್ವೀಕರಿಸಿ, ಯಾವುದೇ ರಕ್ಷಣಾ ಹೇಳಿಕೆ ನೀಡದ ಕಾರಣ, ಆರೋಪಗಳಲ್ಲಿನ ಸತ್ಯಾಸತ್ಯತೆಯನ್ನು ತಿಳಿಯಲು, ಜಿಲ್ಲಾಧಿಕಾರಿಗಳು, ಶಿವಮೊಗ್ಗ ರವರು ಯೋಜನಾಧಿಕಾರಿಗಳು, ಜಲ ಸಂವರ್ಧನೆ ಇಲಾಖೆ, ಶಿವಮೊಗ್ಗ ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಸಹಾಯಕ ನಿರ್ದೇಶಕರು (ಆಡಳಿತ), ಜಿಲ್ಲಾಧಿಕಾರಿಗಳ ಕಛೇರಿ, ಶಿವಮೊಗ್ಗ ಇವರನ್ನು ಮಂಡನಾಧಿಕಾರಿಯಾಗಿ ದಿನಾಂಕ: 10.11.2009 ರಂದು ನೇಮಕ ಮಾಡಿರುತ್ತಾರೆ. ವಿಚಾರಣಾಧಿಕಾರಿಗಳು ವಿಚಾರಣೆ ನಡೆಸಿ, ಆರೋಪಿತರ ವಿರುದ್ಧ ಮಾಡಿರುವ 3 ಆರೋಪಗಳು ಸಾಬೀತಾಗಿದೆ ಎಂದು ವರದಿ ನೀಡಿರುತ್ತಾರೆ. ಕಾರಣ ಜಿಲ್ಲಾಧಿಕಾರಿಗಳು, ಶಿವಮೊಗ್ಗ ರವರು ನೌಕರರಿಗೆ ದಂಡನೆ ವಿಧಿಸುವ ಬಗ್ಗೆ ದಿನಾಂಕ: 04.07.2011 ರಂದು ನೇಮಕ ಪ್ರಾಧಿಕಾರವಾದ ಕೇಂದ್ರ ಕಛೇರಿಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ, ಮೊದಲನೆ ಆರೋಪವಾದ, ದಿನಾಂಕ: 01.07.2008 ರಿಂದ 24.10.2008 ರವರೆಗೆ ಸಾರ್ವಜನಿಕರಿಂದ ವಸೂಲಾದ ಹಣವನ್ನು ಸರ್ಕಾರಕ್ಕೆ ಜಮಾ ಮಾಡದೆ ದುರುಪಯೋಗ ಮಾಡಿರುವ ಬಗ್ಗೆ ಹಣ ವಿಚಾರಣೆಗೆ ಹಾಜರಾದ ಸಾಕ್ಷಿದಾರರ ಹೇಳಿಕೆಯಲ್ಲಿ, ನವೆಂಬರ್ 2008 ರ ಅಂತ್ಯದಲ್ಲಿ ರೂ. 11,866=00 ಗಳನ್ನು ಜಮಾ ಮಾಡದೇ ಇರುವುದು, ಸಾರ್ವಜನಿಕರಿಂದ ಆಪಾದಿತರು ಹಣ ವಸೂಲಿ ಮಾಡುತ್ತಿದ್ದು, ಸದರಿ ಹಣವನ್ನು ಸರ್ಕಾರಕ್ಕೆ ಸರಿಯಾಗಿ ಜಮಾ ಮಾಡದೆ, ತಪಾಸಕರ ಗಮನಕ್ಕೆ ತಾರದೆ ಹಣವನ್ನು ಬ್ಯಾಂಕಿಗೆ ವಿಳಂಬವಾಗಿ ಜಮಾ ಮಾಡುತ್ತಿದ್ದುದು ಸಾಕ್ಷಿದಾರರ ಹೇಳಿಕೆಯಿಂದ ಸಾಬೀತಾಗಿರುತ್ತದೆ. ವಿಚಾರಣೆಗೆ ಹಾಜರಾದ ಸಾಕ್ಷಿದಾರರು ನೀಡಿರುವ ಹೇಳಿಕೆಯಲ್ಲಿ ನವೆಂಬರ್ 2008 ರ ಅಂತ್ಯದಲ್ಲಿ ರೂ. 11,866=00 ಗಳನ್ನು ಜಮಾ ಮಾಡದೆ ಇರುವುದು ಸಾಕ್ಷ್ಯ ದಾಖಲೆಗಳಿಂದ ಸಾಬೀತಾಗಿರುತ್ತದೆ.

2ನೇ ಆರೋಪವಾದ ದಿನಾಂಕ: 01.07.2008 ರಿಂದ 24.10.2008 ರ ಅವಧಿಯ ಸಾರ್ವಜನಿಕರಿಂದ 11ಇ ನಕ್ಷೆ ಕೋರಿ 320 ಅರ್ಜಿಗಳು ಸ್ವೀಕೃತವಾಗಿದ್ದು, ಸದರಿ ಅರ್ಜಿಗಳ ಬಾಬ್ತು ಒಟ್ಟು ರೂ. 1,02,000 ಗಳ ಬಗ್ಗೆ ಸರಿಯಾಗಿ ಲೆಕ್ಕಪತ್ರವಿಡದೆ ಹಣ ದುರುಪಯೋಗ ಪಡಿಸಿಕೊಂಡಿರುವ ಬಗ್ಗೆ ವಿಚಾರಣೆ ಸಂದರ್ಭದಲ್ಲಿ ಸಾಕ್ಷಿದಾರರಾದ ತಹಸೀಲ್ದಾರ್ ರವರು ದಿನಾಂಕ: 30.10.2010 ರಂದು ನೀಡಿರುವ ಹೇಳಿಕೆಯಲ್ಲಿ, ಆಪಾದಿತರಿಂದ ಹಣ ದುರುಪಯೋಗವಾಗಿರುವುದು ನಿಜವಿರುತ್ತದೆ ಎಂದೂ ಮತ್ತೊಬ್ಬ ಸಾಕ್ಷಿದಾರರಾದ ಶ್ರೀ ಹೆಚ್.ಎನ್. ರಾಜು, ಭೂಮಾಪಕರವರು ಸಹ ಹಣ ದುರುಪಯೋಗವಾಗಿರುವ ಆರೋಪ ನಿಜವಿರುತ್ತದೆ ಎಂದು ಹೇಳಿಕೆ ನೀಡಿರುವುದು ಹಾಗೂ ಆಪಾದಿತರು ವಿಚಾರಣೆಗೆ ಗೈರು ಹಾಜರಾಗಿರುವ ಅಂಶದ ಮೇರೆಗೆ ಆರೋಪ ಸಾಬೀತಾಗಿರುತ್ತದೆ ಎಂದು ವಿಚಾರಣಾಧಿಕಾರಿಗಳು ಅಭಿಪ್ರಾಯ ಪಟ್ಟಿರುತ್ತಾರೆ. ಈ ಬಗ್ಗೆ ಪ್ರಕರಣವನ್ನು ಪರಿಶೀಲಿಸಲಾಗಿ, ಹಣ ದುರುಪಯೋಗವಾಗಿರುವ ಬಗ್ಗೆ ತಹಸೀಲ್ದಾರ್, ಶಿಕಾರಿಪುರ ರವರು ದಿನಾಂಕ: 30.05.2009 ರಂದು ಆಪಾದಿತರಿಗೆ ಜ್ಞಾಪನ ನೀಡಿದ್ದು, ಸದರಿ ಜ್ಞಾಪನಕ್ಕೆ ಆಪಾದಿತರು ನೀಡಿರುವ ಹೇಳಿಕೆಯಲ್ಲಿ ನೌಕರರು ದಿನಾಂಕ: 01.07.2008 ರಿಂದ 24.10.2008 ರ ಅವಧಿಯಲ್ಲಿ ಸ್ವೀಕೃತವಾದ 373 11ಇ ಅರ್ಜಿಗಳ ಪೈಕಿ ಒಟ್ಟು ರೂ. 1,11,900 ಗಳನ್ನು ಪಡೆದಿದ್ದು, ಈ ಪೈಕಿ 78,000=00 ಗಳನ್ನು ಪರವಾನಗಿ ಭೂಮಾಪಕರಿಗೆ ಕೊಟ್ಟಿರುವುದಾಗಿಯೂ, ಉಳಿದ 33,900=00 ಗಳನ್ನು ಪಾವತಿಸಲು ಸಿದ್ದನಿರುತ್ತೇನೆ ಎಂದು ಹೇಳಿಕೆ ನೀಡಿರುತ್ತಾರೆ. ಅಲ್ಲದೆ ಆಪಾದಿತರು ತಮ್ಮ ವಿರುದ್ಧ ಮಾಡಿದ ಆರೋಪಗಳನ್ನು ಅಲ್ಲಗಳೆಯುವ ಯಾವುದೇ ದಾಖಲೆಗಳನ್ನು ಹಾಜರುಪಡಿಸದೆ, ವಿಚಾರಣೆಗೆ ಗೈರು ಹಾಜರಾಗಿರುವ ಅಂಶವನ್ನು ಪರಿಶೀಲಿಸಿದಾಗ ನೌಕರರ ವಿರುದ್ಧ ಮಾಡಿರುವ ಆರೋಪ ಸಾಬೀತಾಗಿರುವುದು ವಿಚಾರಣಾ ವರದಿ, ಸಾಕ್ಷಿ ಮತ್ತು ದಾಖಲೆಗಳಿಂದ ಸ್ಪಷ್ಟವಾಗಿ ಕಂಡುಬಂದಿರುತ್ತದೆ. ಇದರಿಂದಾಗಿ ಸ್ಪಷ್ಟವಾಗಿ ಕಂಡುಬರುವುದೇನೆಂದರೆ, ಆಪಾದಿತರು ಸಾರ್ವಜನಿಕರಿಂದ ವಸೂಲಾದ ಹಣವನ್ನು ಸಂಬಂಧಪಟ್ಟ ಪರವಾನಗಿ ಭೂಮಾಪಕರು ವಿತರಣೆ ಮಾಡದೆ ಇರುವುದು ಕಂಡುಬಂದಿದೆ.

3ನೇ ಆರೋಪವಾದ: ದಿನಾಂಕ: 01.07.2008 ರಿಂದ 24.10.2008 ರ ಅವಧಿಯಲ್ಲಿ ಅರ್ಜಿದಾರರಿಂದ ಹೆಚ್ಚಿನ ಮೊಬಲಗು ಪಡೆದು, ನಕಲು ನೀಡದೆ ಸಾರ್ವಜನಿಕರಿಗೆ ತೊಂದರೆ ಉಂಟುಮಾಡಿದ ಬಗ್ಗೆ ಶ್ರೀ ಲೋಕಪ್ಪ ಬಿನ್ ಮಲ್ಲಪ್ಪ ಮಾವುಲೆಕವುಲೆ ಗ್ರಾಮ ಇವರು ದೂರು ಅರ್ಜಿಯ ಆರೋಪ ಕುರಿತು ಸಾಕ್ಷಿದಾರರ ಹೇಳಿಕೆಯಿಂದ ಅರ್ಜಿದಾರರ ಹೇಳಿಕೆಯಿಂದ ಆಪಾದಿತರು ಸಾರ್ವಜನಿಕರಿಂದ ಹೆಚ್ಚಿನ ಹಣ ವಸೂಲು ಮಾಡಿ, ಸರ್ವೆ ಸ್ಕೆಚ್ಚನ್ನು ನಿಗದಿತ ಸಮಯದಲ್ಲಿ ನೀಡದೆ ತೊಂದರೆಯುಂಟು ಮಾಡಿರುವುದು ಹಾಗೂ ಆಪಾದಿತರು ವಿಚಾರಣೆಗೆ ಹಾಜರಾಗದೆ, ತಮ್ಮನ್ನು ರಕ್ಷಣೆ ಮಾಡಿಕೊಳ್ಳುವ ಯಾವುದೇ ಹೇಳಿಕೆ ನೀಡದ ಕಾರಣ, ನೌಕರರ ವಿರುದ್ಧ ಮಾಡಿರುವ ಆರೋಪವು ಸಾಬೀತಾಗಿದೆಯೆಂದು ವಿಚಾರಣಾಧಿಕಾರಿಗಳು ಅಭಿಪ್ರಾಯಪಟ್ಟಿರುತ್ತಾರೆ.

ವಿಚಾರಣಾ ವರದಿಯನ್ನು ದಾಖಲೆಗಳೊಂದಿಗೆ ಪರಿಶೀಲಿಸಿದಾಗ, ನೌಕರರು ವಿಚಾರಣೆಗೆ ಒಂದು ಬಾರಿ ಮಾತ್ರ ಹಾಜರಾಗಿ ನಂತರ ವಿಚಾರಣೆಗೆ ಹಾಜರಾಗದೆ, ತಮ್ಮನ್ನು ರಕ್ಷಿಸಿಕೊಳ್ಳಲು ಯಾವುದೇ ಹೇಳಿಕೆಯಾಗಲೀ, ದಾಖಲೆಗಳನ್ನಾಗಲೀ ವಿಚಾರಣೆಯಲ್ಲಿ ಹಾಜರುಪಡಿಸದೆ ಇರುವುದನ್ನು ಗಮನಿಸಿದಾಗ, ನೌಕರರ ವಿರುದ್ಧ ಮಾಡಿರುವ 3 ಆರೋಪಗಳು ಸಾಬೀತಾಗಿರುವ ಕಾರಣ ಈ ಕಛೇರಿಯಿಂದ ದಿನಾಂಕ: 29.08.2011 / 02.09.2011 ರಂದು ವಿಚಾರಣಾ ವರದಿಯೊಂದಿಗೆ 2ನೇ ಕಾರಣ ಕೇಳಿ ನೋಟೀಸನ್ನು ಜಾರಿ ಮಾಡಲಾಗಿದ್ದು, ನೌಕರರು ದಿನಾಂಕ: 22.09.2011 ರಂದು ನೋಟೀಸನ್ನು ಸ್ವೀಕರಿಸಿದ್ದು, ತಮ್ಮನ್ನು ರಕ್ಷಿಸಿಕೊಳ್ಳುವ ಯಾವುದೇ ಹೇಳಿಕೆಯನ್ನು ನೀಡಿರುವುದಿದಲ್ಲ. ಈ ಎಲ್ಲಾ ಅಂಶಗಳನ್ನು ಪರಿಶೀಲಿಸಿದಾಗ, ಆಪಾದಿತರು ಒಬ್ಬ ಜವಾಬ್ದಾರಿಯುತ ಸರ್ಕಾರಿ ನೌಕರರಾಗಿದ್ದು, ಸಾರ್ವಜನಿಕರಿಂದ ಸ್ವೀಕೃತವಾದ ಹಣವನ್ನು ಸರ್ಕಾರಕ್ಕೆ ಜಮಾ ಮಾಡದೆ ಹಣ ದುರುಪಯೋಗ ಮಾಡಿ ಗಂಭೀರ ತರನಾದ ಕರ್ತವ್ಯ ಲೋಪವೆಸಗಿರುವುದು ವಿಚಾರಣಾ ವರದಿ ಮತ್ತು ಸಾಕ್ಷಿ ಹಾಗೂ ದಾಖಲೆಗಳಿಂದ ಸ್ಪಷ್ಟವಾಗಿ ಕಂಡುಬಂದಿರುತ್ತದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಜೆ.ತ್ಯಾಗರಾಜು, ಭೂಮಾಪಕರು, ತಹಸೀಲ್ದಾರ್ ಕಛೇರಿ, ಶಿಕಾರಿಪುರ ಇವರ ವಿರುದ್ಧ ಮಾಡಲಾಗಿರುವ 3 ಆರೋಪಗಳು ಸಾಬೀತಾಗಿರುವ ಬಗ್ಗೆ ವಿಚಾರಣಾಧಿಕಾರಿಗಳ ವರದಿ, ಸಾಕ್ಷಿಗಳ ಹೇಳಿಕೆ ಮತ್ತು ದಾಖಲೆಗಳಲ್ಲಿನ ಅಂಶಗಳನ್ನು ಪರಿಗಣಿಸಿ, ವಿ.ಪೊನ್ನುರಾಜ್, ಭಾ.ಆ.ಸೇ., ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು ಆದ ನಾನು, ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮ 9(3) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ನಿಯಮ 8(viii) ರನ್ವಯ ಶ್ರೀ ಜೆ.ತ್ಯಾಗರಾಜು, ಭೂಮಾಪಕರು, ತಹಸೀಲ್ದಾರ್ ಕಛೇರಿ, ಶಿಕಾರಿಪುರ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಯಿಂದ ವಜಾಗೊಳಿಸಿ ಆದೇಶಿಸಿದ್ದೇನೆ.

**ಆಯುಕ್ತರು,**
ಭೂಮಾಪನ ಕಂದಾಯ ವ್ಯವಸ್ಥೆ ಮತ್ತು
ಭೂದಾಖಲೆಗಳು, ಬೆಂಗಳೂರು.

**ಪಿ.ಆರ್. 673**

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪನಿಬಂಧಕರ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ.**

**ವಿಷಯ:** ಋಣಸಮಾಪನೆಗೊಂಡಿರುವ ಸುಗಟೂರು ಪರಿಶಿಷ್ಟ ಜಾತಿ ರೇಷ್ಮೆ ಬೆಳೆಗಾರರ ಸಾಮೂಹಿಕ ನೀರಾವರಿ ಸಹಕಾರ ಸಂಘ ನಿ., ಕೋಲಾರ ತಾಲ್ಲೂಕು ಈ ಸಂಘದ ನೋಂದಣಿಯನ್ನು ರದ್ದುಪಡಿಸುವ ಬಗ್ಗೆ.

**ಉಲ್ಲೇಖ:** 1) ಈ ಕಛೇರಿಯ ಆದೇಶದ ಸಮಸಂಖ್ಯೆ ಡಿಆರ್‌ಕೆ/ಎಲ್‌ಕ್ಯೂಡಿ/ಸಿಆರ್/23/2005–06, ದಿನಾಂಕ: 28–8–2006.
2) ಸಹಕಾರ ಸಂಘಗಳ ನಿರೀಕ್ಷಕರ ಪ್ರಸ್ತಾವೆ ದಿನಾಂಕ: 30–3–2012.
3) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಇವರ ಪತ್ರದ ಸಂಖ್ಯೆ:ಎಆರ್/49/ಸಮಾಪನೆ/ಸಿಆರ್.10/2011–12 ದಿನಾಂಕ: 31–3–2012.

**ಪ್ರಸ್ತಾವನೆ :–**

ಋಣಸಮಾಪನೆಗೊಂಡಿರುವ ಸುಗಟೂರು ಪರಿಶಿಷ್ಟ ಜಾತಿ ರೇಷ್ಮೆ ಬೆಳೆಗಾರರ ಸಾಮೂಹಿಕ ನೀರಾವರಿ ಸಹಕಾರ ಸಂಘ ನಿ., ಕೋಲಾರ ತಾಲ್ಲೂಕು ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಇವರ ಆದೇಶ ಸಂಖ್ಯೆ: ಎಆರ್/49/ಇಎಸ್‌ಟಿ/ಸಿಆರ್.91/ನೋಂ/23018/1995–96 ದಿನಾಂಕ : 25–11–95 ರಂತೆ ನೋಂದಣಿಯಾಗಿರುತ್ತದೆ. ಈ ಸಹಕಾರ ಸಂಘವು ಉದ್ದೇಶಿತ ಬೈಲಾ, ಸಹಕಾರ ಸಂಘಗಳ ಕಾಯ್ದೆ ರೀತ್ಯಾ ಹಾಗೂ ಸಂಘದ ಸದಸ್ಯರ ಹಿತದೃಷ್ಟಿಯಿಂದ ಸಂಘವು ಕಾರ್ಯನಿರ್ವಹಿಸದೆ, ಕೆಲವು ವರ್ಷಗಳಿಂದ ಸ್ಥಗಿತಗೊಂಡ ಪ್ರಯುಕ್ತ, ಈ ಕಛೇರಿಯ ಉಲ್ಲೇಖ (1) ರ ಆದೇಶದಲ್ಲಿ ಈ ಸಂಘವನ್ನು ಋಣಸಮಾಪನೆಗೊಳಿಸಿ, ಸಹಕಾರ ಸಂಘಗಳ ನಿರೀಕ್ಷಕರು, ಕೋಲಾರ ತಾಲ್ಲೂಕು ಇವರನ್ನು ಸಮಾಪನಾಧಿಕಾರಿನ್ನಾಗಿ ನೇಮಿಸಲಾಗಿತ್ತು.

ಉಲ್ಲೇಖ (2) ರಲ್ಲಿ ಸಹಕಾರ ಸಂಘಗಳ ನಿರೀಕ್ಷಕರು, ಕೋಲಾರ ತಾಲ್ಲೂಕು ಹಾಗೂ ಸಂಘದ ಸಮಾಪನಾಧಿಕಾರಿಯವರು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರರವರಿಗೆ ವರದಿ ಸಲ್ಲಿಸಿ, ಸಂಘವು ಸುಮಾರು ವರ್ಷಗಳಿಂದ ಯಾವುದೇ ಕೆಲಸ ನಿರ್ವಹಿಸದೇ ಸ್ಥಗಿತಗೊಂಡಿದ್ದು, ಸಂಘದ ಯಾವುದೇ ಪುಸ್ತಕಗಳು ಲಭ್ಯವಿಲ್ಲದ ಕಾರಣ ಸಮಾಪನಾಧಿಕಾರಿಯು ಸ್ವಯಂ ಪ್ರಭಾರವನ್ನು ವಹಿಸಿಕೊಂಡಿರುವುದಾಗಿ, ಸಂಘದ ಪುನ:ಶ್ಚೇತನಕ್ಕೆ ಯಾವುದೇ ರಹಾ ಇಲ್ಲದ ಕಾರಣ ಈ ಸಂಘದ ನೋಂದಣಿಯನ್ನು ರದ್ದುಪಡಿಸಬೇಕೆಂದು ಕೋರಿ, ದಿನಾಂಕ: 26–3–2012 ರಂದು ನಡೆದ ಸಮಾಪನಾಧಿಕಾರಿಗಳ ಸಭೆಯಲ್ಲಿ ಸಮಾಪನಾಧಿಕಾರಿಗಳು ಕೈಗೊಂಡ ತೀರ್ಮಾನದ ನಡವಳಿಕೆಗಳನ್ನು ಮತ್ತು ಸಂಘದ ಶೂನ್ಯ ಆಸ್ತಿ–ಜವಾಬ್ದಾರಿ ತ:ಖ್ತೆಯನ್ನು ಸಲ್ಲಿಸಿರುತ್ತಾರೆ. ಉಲ್ಲೇಖ (3) ರಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರರವರು ಸದರಿ ಅಧಿಕಾರಿಗಳ ಪ್ರಸ್ತಾವೆಯೊಂದಿಗೆ ನೋಂದಣಿ ರದ್ಧತಿಗಾಗಿ ಶಿಫಾರಸ್ಸು ಮಾಡಿರುತ್ತಾರೆ.

ಈ ರೀತಿ ಸಮಾಪನಾ ಸಂಘದ ಆಸ್ತಿ ಮತ್ತು ಜವಾಬ್ದಾರಿಯನ್ನು ವಿಲೇವಾರಿ ಮಾಡಿರುವುದರಿಂದ ಹಾಗೂ ಸಂಘವನ್ನು ಮುಂದುವರೆಸಿಕೊಂಡು ಹೋಗುವುದರಿಂದ ಯಾವುದೇ ಪ್ರಯೋಜನ ಇಲ್ಲದೇ ಇರುವುದರಿಂದ ಸಹಕಾರ ಸಂಘಗಳ ಸಹಾಯಕ ನಿಬಂಧಕರು,ಕೋಲಾರ ಇವರ ಶಿಫಾರಸ್ಸನ್ನು ಪರಿಗಣಿಸಿ ಈ ಸಂಘದ ನೋಂದಣಿಯನ್ನು ರದ್ದುಪಡಿಸಲು ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

**ನಂ: ಡಿಆರ್‌ಕೆ/ಎಲ್‌ಕ್ಯೂಡಿ/ಸಿಆರ್./ 23/2005–06, ದಿನಾಂಕ: 31–3–2012**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/ಸಿಎಲ್‌ಎಂ/2001 ದಿನಾಂಕ: 21–11–2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಕೆ.ಎಲ್.ನರಸಿಂಹಮೂರ್ತಿ, ಸಹಕಾರ

ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಆದ ನಾನು ಋಣಸಮಾಪನೆಗೊಂಡಿರುವ ಸುಗಟೂರು ಪರಿಶಿಷ್ಟ ಜಾತಿ ರೇಷ್ಮೆ ಬೆಳೆಗಾರರ ಸಾಮೂಹಿಕ ನೀರಾವರಿ ಸಹಕಾರ ಸಂಘ ನಿ., ಕೋಲಾರ ತಾಲ್ಲೂಕು ಈ ಸಹಕಾರ ಸಂಘದ ನೋಂದಣಿ ಸಂಖ್ಯೆ: ಎಆರ್/ 49/ ಇಎಸ್‌ಟಿ/ ಸಿಆರ್.91/ ನೋಂ/ 23018/1995–96 ದಿನಾಂಕ : 25–11–95 ನ್ನು ರದ್ದುಗೊಳಿಸಿ, ಸಂಘವನ್ನು ವಿಸರ್ಜಿಸಿ ಆದೇಶಿಸಿದ್ದೇನೆ.

ಈ ಆದೇಶದ ದಿನಾಂಕದಿಂದ ಸದರಿ ಸಂಘವು ಅಸ್ತಿತ್ವದಲ್ಲಿಲ್ಲದೆ ಸಂಪೂರ್ಣವಾಗಿ ವಿಸರ್ಜಿತವಾಗಿದೆ ಎಂದು ಪರಿಗಣಿಸತಕ್ಕದ್ದು.

ಈ ಆದೇಶವನ್ನು ಈ ದಿನ ಅಂದರೆ, ದಿನಾಂಕ: 31–3–2012 ರಂದು ನನ್ನ ಸಹಿ ಹಾಗೂ ಈ ಕಛೇರಿಯ ಮೊಹರಿನೊಂದಿಗೆ ಹೊರಡಿಸಿದೆ.

**ಕೆ.ಎಲ್. ನರಸಿಂಹಮೂರ್ತಿ**
ಸಹಕಾರ ಸಂಘಗಳ ಉಪನಿಬಂಧಕರು,
ಕೋಲಾರ ಜಿಲ್ಲೆ, ಕೋಲಾರ.

**ಪಿ.ಆರ್. 678**

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಉಪನಿಬಂಧಕರ ಕಾರ್ಯಾಲಯ , ಕೋಲಾರ ಜಿಲ್ಲೆ, ಕೋಲಾರ

**ವಿಷಯ:** ಋಣಸಮಾಪನೆಗೊಂಡಿರುವ ಬಾಣೇಶ್ವರಸ್ವಾಮಿ ಸಹಕಾರ ಸಂಘ ನಿ., ನರಸಾಪುರ, ಕೋಲಾರ ತಾಲ್ಲೂಕು ಈ ಸಂಘದ ನೋಂದಣಿಯನ್ನು ರದ್ದುಪಡಿಸುವ ಬಗ್ಗೆ.

**ಉಲ್ಲೇಖ:** 1) ಈ ಕಛೇರಿಯ ಆದೇಶದ ಸಮಸಂಖ್ಯೆ ಡಿಆರ್‌ಕೆ/ಎಲ್‌ಕ್ಯೂಡಿ/ಸಿಆರ್/62/ 1997–98, ದಿನಾಂಕ: 25–3–2012.

2) ಸಹಕಾರ ಸಂಘಗಳ ನಿರೀಕ್ಷಕರ ಪ್ರಸ್ತಾವೆ ದಿನಾಂಕ:30–3–2012.

3) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಇವರ ಪತ್ರದ ಸಂಖ್ಯೆ: ಎಆರ್/49/ಸಮಾಪನೆ/ ಸಿಆರ್.10/2011–12, ದಿನಾಂಕ: 31–3–2012.

**ಪ್ರಸ್ತಾವನೆ :–**

ಋಣಸಮಾಪನೆಗೊಂಡಿರುವ ಬಾಣೇಶ್ವರಸ್ವಾಮಿ ಸಹಕಾರ ಸಂಘ ನಿ., ನರಸಾಪುರ, ಕೋಲಾರ ತಾಲ್ಲೂಕು ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಇವರ ಆದೇಶ ಸಂಖ್ಯೆ: ಎಆರ್‌ಕೆ/381/1913–14 ದಿನಾಂಕ : 29–8–1913 ರಂತೆ ನೋಂದಣಿಯಾಗಿರುತ್ತದೆ. ಈ ಸಹಕಾರ ಸಂಘವು ಉದ್ದೇಶಿತ ಬೈಲಾ, ಸಹಕಾರ ಸಂಘಗಳ ಕಾಯ್ದೆ ರೀತ್ಯಾ ಹಾಗೂ ಸಂಘದ ಸದಸ್ಯರ ಹಿತದೃಷ್ಟಿಯಿಂದ ಸಂಘವು ಕಾರ್ಯನಿರ್ವಹಿಸದೆ, ಕೆಲವು ವರ್ಷಗಳಿಂದ ಸ್ಥಗಿತಗೊಂಡ ಪ್ರಯುಕ್ತ, ಈ ಕಛೇರಿಯ ಉಲ್ಲೇಖ (1) ರ ಆದೇಶದಲ್ಲಿ ಈ ಸಂಘವನ್ನು ಋಣಸಮಾಪನೆಗೊಳಿಸಿ, ಸಹಕಾರ ಸಂಘಗಳ ನಿರೀಕ್ಷಕರು , ಕೋಲಾರ ತಾಲ್ಲೂಕು ಇವರನ್ನು ಸಮಾಪನಾಧಿಕಾರಿನ್ನಾಗಿ ನೇಮಿಸಲಾಗಿತ್ತು.

ಉಲ್ಲೇಖ (2) ರಲ್ಲಿ ಸಹಕಾರ ಸಂಘಗಳ ನಿರೀಕ್ಷಕರು, ಕೋಲಾರ ತಾಲ್ಲೂಕು ಹಾಗೂ ಸಂಘದ ಸಮಾಪನಾಧಿಕಾರಿಯವರು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರರವರಿಗೆ ವರದಿ ಸಲ್ಲಿಸಿ, ಸಂಘವು ಸುಮಾರು ವರ್ಷಗಳಿಂದ ಯಾವುದೇ ಕೆಲಸ ನಿರ್ವಹಿಸದೇ ಸ್ಥಗಿತಗೊಂಡಿದ್ದು, ಸಂಘದ ಯಾವುದೇ ಪುಸ್ತಕಗಳು ಲಭ್ಯವಿಲ್ಲದ ಕಾರಣ ಸಮಾಪನಾಧಿಕಾರಿಯು ಸ್ವಯಂ ಪ್ರಭಾರವನ್ನು ವಹಿಸಿಕೊಂಡಿರುವುದಾಗಿ, ಸಂಘದ ಪುನ:ಶ್ಚೇತನಕ್ಕೆ ಯಾವುದೇ ರಹಾ ಇಲ್ಲದ ಕಾರಣ ಈ ಸಂಘದ ನೋಂದಣಿಯನ್ನು ರದ್ದುಪಡಿಸಬೇಕೆಂದು ಕೋರಿ, ದಿನಾಂಕ: 27–3–2012 ರಂದು ನಡೆದ ಸಮಾಪನಾಧಿಕಾರಿಗಳ ಸಭೆಯಲ್ಲಿ ಸಮಾಪನಾಧಿಕಾರಿಗಳು ಕೈಗೊಂಡ ತೀರ್ಮಾನದ ನಡವಳಿಕೆಗಳನ್ನು ಮತ್ತು ಸಂಘದ ಶೂನ್ಯ ಆಸ್ತಿ–ಜವಾಬ್ದಾರಿ ತ:ಖ್ತೆಯನ್ನು ಸಲ್ಲಿಸಿರುತ್ತಾರೆ. ಉಲ್ಲೇಖ (3) ರಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರರವರು ಸದರಿ ಅಧಿಕಾರಿಗಳ ಪ್ರಸ್ತಾವೆಯೊಂದಿಗೆ ನೋಂದಣಿ ರದ್ಧತಿಗಾಗಿ ಶಿಫಾರಸ್ಸು ಮಾಡಿರುತ್ತಾರೆ.

ಈ ರೀತಿ ಸಮಾಪನಾ ಸಂಘದ ಆಸ್ತಿ ಮತ್ತು ಜವಾಬ್ದಾರಿಯನ್ನು ವಿಲೇವಾರಿ ಮಾಡಿರುವುದರಿಂದ ಹಾಗೂ ಸಂಘವನ್ನು ಮುಂದುವರೆಸಿಕೊಂಡು ಹೋಗುವುದರಿಂದ ಯಾವುದೇ ಪ್ರಯೋಜನ ಇಲ್ಲದೇ ಇರುವುದರಿಂದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಇವರ ಶಿಫಾರಸ್ಸನ್ನು ಪರಿಗಣಿಸಿ ಈ ಸಂಘದ ನೋಂದಣಿಯನ್ನು ರದ್ದುಪಡಿಸಲು ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

### ಆದೇಶ

**ನಂ: ಡಿಆರ್‌ಕೆ/ಎಲ್‌ಕ್ಯೂಡಿ/ಸಿಆರ್./ 62/1997–98, ದಿನಾಂಕ: 31–3–2012**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/ಸಿಎಲ್‌ಎಂ/2001 ದಿನಾಂಕ: 21–11–2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಕೆ.ಎಲ್.ನರಸಿಂಹಮೂರ್ತಿ, ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಆದ ನಾನು ಋಣಸಮಾಪನೆಗೊಂಡಿರುವ ಬಾಣೇಶ್ವರಸ್ವಾಮಿ ಸಹಕಾರ ಸಂಘ ನಿ., ನರಸಾಪುರ, ಕೋಲಾರ ತಾಲ್ಲೂಕು ಈ ಸಹಕಾರ ಸಂಘದ ನೋಂದಣಿ ಸಂಖ್ಯೆ: ಎಆರ್‌ಕೆ/381/1913–14 ದಿನಾಂಕ: 29–8–1913 ನ್ನು ರದ್ದುಗೊಳಿಸಿ, ಸಂಘವನ್ನು ವಿಸರ್ಜಿಸಿ ಆದೇಶಿಸಿದ್ದೇನೆ.

ಈ ಆದೇಶದ ದಿನಾಂಕದಿಂದ ಸದರಿ ಸಂಘವು ಅಸ್ತಿತ್ವದಲ್ಲಿಲ್ಲದೆ ಸಂಪೂರ್ಣವಾಗಿ ವಿಸರ್ಜಿತವಾಗಿದೆ ಎಂದು ಪರಿಗಣಿಸತಕ್ಕದ್ದು.

ಈ ಆದೇಶವನ್ನು ಈ ದಿನ ಅಂದರೆ, ದಿನಾಂಕ: 31–3–2012 ರಂದು ನನ್ನ ಸಹಿ ಹಾಗೂ ಈ ಕಛೇರಿಯ ಮೊಹರಿನೊಂದಿಗೆ ಹೊರಡಿಸಿದೆ.

**ಕೆ.ಎಲ್. ನರಸಿಂಹಮೂರ್ತಿ**
ಸಹಕಾರ ಸಂಘಗಳ ಉಪನಿಬಂಧಕರು,
ಕೋಲಾರ ಜಿಲ್ಲೆ, ಕೋಲಾರ.

**ಪಿ.ಆರ್. 679**

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಉಪನಿಬಂಧಕರ ಕಾರ್ಯಾಲಯ , ಕೋಲಾರ ಜಿಲ್ಲೆ, ಕೋಲಾರ.

**ವಿಷಯ:** ಋಣಸಮಾಪನೆಗೊಂಡಿರುವ ಕೋಲಾರ ಟೌನ್ ಹಗ್ಗ ಹೆಣೆಯುವವರ ಸಹಕಾರ ಸಂಘ ನಿ., ಕೋಲಾರ ತಾಲ್ಲೂಕು ಈ ಸಂಘದ ನೋಂದಣಿಯನ್ನು ರದ್ದುಪಡಿಸುವ ಬಗ್ಗೆ.

**ಉಲ್ಲೇಖ:** 1) ಈ ಕಛೇರಿಯ ಆದೇಶದ ಸಮಸಂಖ್ಯೆ ಡಿಆರ್‌ಕೆ/ಎಲ್‌ಕ್ಯೂಡಿ/ಸಿಆರ್/20/ 2005–06, ದಿನಾಂಕ: 25–8–2005.

2) ಸಹಕಾರ ಸಂಘಗಳ ನಿರೀಕ್ಷಕರ ಪ್ರಸ್ತಾವೆ ದಿನಾಂಕ:30–3–2012.

3) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಇವರ ಪತ್ರದ ಸಂಖ್ಯೆ: ಎಆರ್/49/ಸಮಾಪನೆ/ ಸಿಆರ್.10/2011–12 ದಿನಾಂಕ: 31–3–2012.

**ಪ್ರಸ್ತಾವನೆ :–**

ಋಣಸಮಾಪನೆಗೊಂಡಿರುವ ಕೋಲಾರ ಟೌನ್ ಹಗ್ಗ ಹೆಣೆಯುವವರ ಸಹಕಾರ ಸಂಘ ನಿ., ಕೋಲಾರ ತಾಲ್ಲೂಕು ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಇವರ ಆದೇಶ ಸಂಖ್ಯೆ: ಎಆರ್‌ಕೆ/ಬಿ/15015/1986–87 ದಿನಾಂಕ : 18–1–1986 ರಂತೆ ನೋಂದಣಿಯಾಗಿರುತ್ತದೆ. ಈ ಸಹಕಾರ ಸಂಘವು ಉದ್ದೇಶಿತ ಬೈಲಾ, ಸಹಕಾರ ಸಂಘಗಳ ಕಾಯ್ದೆ ರೀತ್ಯಾ ಹಾಗೂ ಸಂಘದ ಸದಸ್ಯರ ಹಿತದೃಷ್ಟಿಯಿಂದ ಸಂಘವು ಕಾರ್ಯನಿರ್ವಹಿಸದೆ, ಕೆಲವು ವರ್ಷಗಳಿಂದ ಸ್ಥಗಿತಗೊಂಡ ಪ್ರಯುಕ್ತ, ಈ ಕಛೇರಿಯ ಉಲ್ಲೇಖ (1) ರ ಆದೇಶದಲ್ಲಿ ಈ ಸಂಘವನ್ನು ಋಣಸಮಾಪನೆಗೊಳಿಸಿ, ಸಹಕಾರ ಸಂಘಗಳ ನಿರೀಕ್ಷಕರು , ಕೋಲಾರ ತಾಲ್ಲೂಕು ಇವರನ್ನು ಸಮಾಪನಾಧಿಕಾರಿನ್ನಾಗಿ ನೇಮಿಸಲಾಗಿತ್ತು.

ಉಲ್ಲೇಖ (2) ರಲ್ಲಿ ಸಹಕಾರ ಸಂಘಗಳ ನಿರೀಕ್ಷಕರು, ಕೋಲಾರ ತಾಲ್ಲೂಕು ಹಾಗೂ ಸಂಘದ ಸಮಾಪನಾಧಿಕಾರಿಯವರು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರರವರಿಗೆ ವರದಿ ಸಲ್ಲಿಸಿ, ಸಂಘವು ಸುಮಾರು ವರ್ಷಗಳಿಂದ ಯಾವುದೇ ಕೆಲಸ ನಿರ್ವಹಿಸದೇ ಸ್ಥಗಿತಗೊಂಡಿದ್ದು, ಸಂಘದ ಯಾವುದೇ ಪುಸ್ತಕಗಳು ಲಭ್ಯವಿಲ್ಲದ ಕಾರಣ ಸಮಾಪನಾಧಿಕಾರಿಯು ಸ್ವಯಂ ಪ್ರಭಾರವನ್ನು ವಹಿಸಿಕೊಂಡಿರುವುದಾಗಿ, ಸಂಘದ ಪುನ:ಶ್ಚೇತನಕ್ಕೆ ಯಾವುದೇ ರಹಾ ಇಲ್ಲದ ಕಾರಣ ಈ ಸಂಘದ ನೋಂದಣಿಯನ್ನು ರದ್ದುಪಡಿಸಬೇಕೆಂದು ಕೋರಿ, ದಿನಾಂಕ: 26–3–2012 ರಂದು ನಡೆದ ಸಮಾಪನಾಧಿಕಾರಿಗಳ ಸಭೆಯಲ್ಲಿ ಸಮಾಪನಾಧಿಕಾರಿಗಳು ಕೈಗೊಂಡ ತೀರ್ಮಾನದ ನಡವಳಿಕೆಗಳನ್ನು ಮತ್ತು ಸಂಘದ ಶೂನ್ಯ ಆಸ್ತಿ–ಜವಾಬ್ದಾರಿ ತ:ಖ್ತೆಯನ್ನು ಸಲ್ಲಿಸಿರುತ್ತಾರೆ. ಉಲ್ಲೇಖ (3) ರಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರರವರು ಸದರಿ ಅಧಿಕಾರಿಗಳ ಪ್ರಸ್ತಾವೆಯೊಂದಿಗೆ ನೋಂದಣಿ ರದ್ಧತಿಗಾಗಿ ಶಿಫಾರಸ್ಸು ಮಾಡಿರುತ್ತಾರೆ.

ಈ ರೀತಿ ಸಮಾಪನಾ ಸಂಘದ ಆಸ್ತಿ ಮತ್ತು ಜವಾಬ್ಧಾರಿಯನ್ನು ವಿಲೇವಾರಿ ಮಾಡಿರುವುದರಿಂದ ಹಾಗೂ ಸಂಘವನ್ನು ಮುಂದುವರೆಸಿಕೊಂಡು ಹೋಗುವುದರಿಂದ ಯಾವುದೇ ಪ್ರಯೋಜನ ಇಲ್ಲದೇ ಇರುವುದರಿಂದ ಸಹಕಾರ ಸಂಘಗಳ ಸಹಾಯಕ ನಿಬಂಧಕರು,ಕೋಲಾರ ಇವರ ಶಿಫಾರಸ್ಸನ್ನು ಪರಿಗಣಿಸಿ ಈ ಸಂಘದ ನೋಂದಣಿಯನ್ನು ರದ್ದುಪಡಿಸಲು ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

## ಆದೇಶ

**ನಂ: ಡಿಆರ್‌ಕೆ/ಎಲ್‌ಕ್ಯೂಡಿ/ಸಿಆರ್./ 20/2005–06, ದಿನಾಂಕ: 31–3–2012**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/ಸಿಎಲ್ಎಂ/2001 ದಿನಾಂಕ: 21–11–2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಕೆ.ಎಲ್.ನರಸಿಂಹಮೂರ್ತಿ, ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಆದ ನಾನು ಋಣಸಮಾಪನೆಗೊಂಡಿರುವ ಕೋಲಾರ ಟೌನ್ ಹಗ್ಗ ಹೆಣೆಯುವವರ ಸಹಕಾರ ಸಂಘ ನಿ., ಕೋಲಾರ ತಾಲ್ಲೂಕು ಈ ಸಹಕಾರ ಸಂಘದ ನೋಂದಣಿ ಸಂಖ್ಯೆ: ಎಆರ್‌ಕೆ/ಬಿ/15015/1986–87 ದಿನಾಂಕ : 18–1–1986 ನ್ನು ರದ್ದುಗೊಳಿಸಿ, ಸಂಘವನ್ನು ವಿಸರ್ಜಿಸಿ ಆದೇಶಿಸಿದ್ದೇನೆ.

ಈ ಆದೇಶದ ದಿನಾಂಕದಿಂದ ಸದರಿ ಸಂಘವು ಅಸ್ತಿತ್ವದಲ್ಲಿಲ್ಲದೆ ಸಂಪೂರ್ಣವಾಗಿ ವಿಸರ್ಜಿತವಾಗಿದೆ ಎಂದು ಪರಿಗಣಿಸತಕ್ಕದ್ದು.

ಈ ಆದೇಶವನ್ನು ಈ ದಿನ ಅಂದರೆ, ದಿನಾಂಕ: 31–3–2012 ರಂದು ನನ್ನ ಸಹಿ ಹಾಗೂ ಈ ಕಛೇರಿಯ ಮೊಹರಿನೊಂದಿಗೆ ಹೊರಡಿಸಿದೆ.

**ಕೆ.ಎಲ್. ನರಸಿಂಹಮೂರ್ತಿ**
ಸಹಕಾರ ಸಂಘಗಳ ಉಪನಿಬಂಧಕರು,
ಕೋಲಾರ ಜಿಲ್ಲೆ, ಕೋಲಾರ.

**ಪಿ.ಆರ್. 680**

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಉಪನಿಬಂಧಕರ ಕಾರ್ಯಾಲಯ , ಕೋಲಾರ ಜಿಲ್ಲೆ, ಕೋಲಾರ.

**ವಿಷಯ:** ಋಣಸಮಾಪನೆಗೊಂಡಿರುವ ತೆಂಗಿನ ನಾರಿನ ಕೈಗಾರಿಕಾ ಸಹಕಾರ ಸಂಘ ನಿ., ಕೋಲಾರ ತಾಲ್ಲೂಕು ಈ ಸಂಘದ ನೋಂದಣಿಯನ್ನು ರದ್ದುಪಡಿಸುವ ಬಗ್ಗೆ.

**ಉಲ್ಲೇಖ:** 1) ಈ ಕಛೇರಿಯ ಆದೇಶದ ಸಮಸಂಖ್ಯೆ ಡಿಆರ್‌ಕೆ/ಎಲ್‌ಕ್ಯೂಡಿ/ಸಿಆರ್/29/ 2000–01 ದಿನಾಂಕ: 30–4–2001

2) ಸಹಕಾರ ಸಂಘಗಳ ನಿರೀಕ್ಷಕರ ಪ್ರಸ್ತಾವೆ ದಿನಾಂಕ:30–3–2012.

3) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಇವರ ಪತ್ರದ ಸಂಖ್ಯೆ: ಎಆರ್/49/ಸಮಾಪನೆ/ ಸಿಆರ್.10/2011–12 ದಿನಾಂಕ: 31–3–2012.

**ಪ್ರಸ್ತಾವನೆ :–**

ಋಣಸಮಾಪನೆಗೊಂಡಿರುವ ತೆಂಗಿನ ನಾರಿನ ಕೈಗಾರಿಕಾ ಸಹಕಾರ ಸಂಘ ನಿ., ಕೋಲಾರ ತಾಲ್ಲೂಕು ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಇವರ ಆದೇಶ ಸಂಖ್ಯೆ: ಎಆರ್/49/ಯೋಜನೆ/ಸಿಆರ್.23/ನೋಂದಣಿ/25676/98–99 ರಂತೆ ನೋಂದಣಿಯಾಗಿರುತ್ತದೆ. ಈ ಸಹಕಾರ ಸಂಘವು ಉದ್ದೇಶಿತ ಬೈಲಾ, ಸಹಕಾರ ಸಂಘಗಳ ಕಾಯ್ದೆ ರೀತ್ಯಾ ಹಾಗೂ ಸಂಘದ ಸದಸ್ಯರ ಹಿತದೃಷ್ಟಿಯಿಂದ ಸಂಘವು ಕಾರ್ಯನಿರ್ವಹಿಸದೆ, ಕೆಲವು ವರ್ಷಗಳಿಂದ ಸ್ಥಗಿತಗೊಂಡ ಪ್ರಯುಕ್ತ, ಈ ಕಛೇರಿಯ ಉಲ್ಲೇಖ (1) ರ ಆದೇಶದಲ್ಲಿ ಈ ಸಂಘವನ್ನು ಋಣಸಮಾಪನೆಗೊಳಿಸಿ, ಸಹಕಾರ ಸಂಘಗಳ ನಿರೀಕ್ಷಕರು , ಕೋಲಾರ ತಾಲ್ಲೂಕು ಇವರನ್ನು ಸಮಾಪನಾಧಿಕಾರಿನ್ನಾಗಿ ನೇಮಿಸಲಾಗಿತ್ತು.

ಉಲ್ಲೇಖ (2) ರಲ್ಲಿ ಸಹಕಾರ ಸಂಘಗಳ ನಿರೀಕ್ಷಕರು, ಕೋಲಾರ ತಾಲ್ಲೂಕು ಹಾಗೂ ಸಂಘದ ಸಮಾಪನಾಧಿಕಾರಿಯವರು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರರವರಿಗೆ ವರದಿ ಸಲ್ಲಿಸಿ, ಸಂಘವು ಸುಮಾರು ವರ್ಷಗಳಿಂದ ಯಾವುದೇ ಕೆಲಸ ನಿರ್ವಹಿಸದೇ ಸ್ಥಗಿತಗೊಂಡಿದ್ದು, ಸಂಘದ ಯಾವುದೇ ಪುಸ್ತಕಗಳು ಲಭ್ಯವಿಲ್ಲದ ಕಾರಣ ಸಮಾಪನಾಧಿಕಾರಿಯು ಸ್ವಯಂ ಪ್ರಭಾರವನ್ನು ವಹಿಸಿಕೊಂಡಿರುವುದಾಗಿ, ಸಂಘದ ಪುನ:ಶ್ಚೇತನಕ್ಕೆ ಯಾವುದೇ ರಹಾ ಇಲ್ಲದ ಕಾರಣ ಈ ಸಂಘದ ನೋಂದಣಿಯನ್ನು ರದ್ದುಪಡಿಸಬೇಕೆಂದು ಕೋರಿ, ದಿನಾಂಕ: 26–3–2012 ರಂದು ನಡೆದ ಸಮಾಪನಾಧಿಕಾರಿಗಳ ಸಭೆಯಲ್ಲಿ ಸಮಾಪನಾಧಿಕಾರಿಗಳು ಕೈಗೊಂಡ ತೀರ್ಮಾನದ ನಡವಳಿಕೆಗಳನ್ನು ಮತ್ತು ಸಂಘದ ಶೂನ್ಯ ಆಸ್ತಿ–ಜವಾಬ್ಧಾರಿ ತ:ಖ್ತೆಯನ್ನು ಸಲ್ಲಿಸಿರುತ್ತಾರೆ. ಉಲ್ಲೇಖ (3) ರಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರರವರು ಸದರಿ ಅಧಿಕಾರಿಗಳ ಪ್ರಸ್ತಾವೆಯೊಂದಿಗೆ ನೋಂದಣಿ ರದ್ಧತಿಗಾಗಿ ಶಿಫಾರಸ್ಸು ಮಾಡಿರುತ್ತಾರೆ.

ಈ ರೀತಿ ಸಮಾಪನಾ ಸಂಘದ ಆಸ್ತಿ ಮತ್ತು ಜವಾಬ್ಧಾರಿಯನ್ನು ವಿಲೇವಾರಿ ಮಾಡಿರುವುದರಿಂದ ಹಾಗೂ ಸಂಘವನ್ನು ಮುಂದುವರೆಸಿಕೊಂಡು ಹೋಗುವುದರಿಂದ ಯಾವುದೇ ಪ್ರಯೋಜನ ಇಲ್ಲದೇ ಇರುವುದರಿಂದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಇವರ ಶಿಫಾರಸ್ಸನ್ನು ಪರಿಗಣಿಸಿ ಈ ಸಂಘದ ನೋಂದಣಿಯನ್ನು ರದ್ದುಪಡಿಸಲು ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

### ಆದೇಶ

**ನಂ: ಡಿಆರ್‌ಕೆ/ಎಲ್‌ಕ್ಯೂಡಿ/ಸಿಆರ್./ 29/2000–01, ದಿನಾಂಕ: 31–3–2012**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/ಸಿಎಲ್‌ಎಂ/2001 ದಿನಾಂಕ: 21–11–2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಕೆ.ಎಲ್.ನರಸಿಂಹಮೂರ್ತಿ, ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಆದ ನಾನು ಋಣಸಮಾಪನೆಗೊಂಡಿರುವ ತೆಂಗಿನ ನಾರಿನ ಕೈಗಾರಿಕಾ ಸಹಕಾರ ಸಂಘ ನಿ., ಕೋಲಾರ ತಾಲ್ಲೂಕು ಈ ಸಹಕಾರ ಸಂಘದ ನೋಂದಣಿ ಸಂಖ್ಯೆ: ಎಆರ್/49/ಯೋಜನೆ/ಸಿಆರ್.23/ನೋಂದಣಿ/25676/98–99 ನ್ನು ರದ್ದುಗೊಳಿಸಿ, ಸಂಘವನ್ನು ವಿಸರ್ಜಿಸಿ ಆದೇಶಿಸಿದ್ದೇನೆ.

ಈ ಆದೇಶದ ದಿನಾಂಕದಿಂದ ಸದರಿ ಸಂಘವು ಅಸ್ತಿತ್ವದಲ್ಲಿಲ್ಲದೆ ಸಂಪೂರ್ಣವಾಗಿ ವಿಸರ್ಜಿತವಾಗಿದೆ ಎಂದು ಪರಿಗಣಿಸತಕ್ಕದ್ದು.

ಈ ಆದೇಶವನ್ನು ಈ ದಿನ ಅಂದರೆ, ದಿನಾಂಕ: 31–3–2012 ರಂದು ನನ್ನ ಸಹಿ ಹಾಗೂ ಈ ಕಛೇರಿಯ ಮೊಹರಿನೊಂದಿಗೆ ಹೊರಡಿಸಿದೆ.

**ಕೆ.ಎಲ್. ನರಸಿಂಹಮೂರ್ತಿ**
ಸಹಕಾರ ಸಂಘಗಳ ಉಪನಿಬಂಧಕರು,
ಕೋಲಾರ ಜಿಲ್ಲೆ, ಕೋಲಾರ.

**ಪಿ.ಆರ್. 684**

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಉಪನಿಬಂಧಕರ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ.

**ವಿಷಯ:** ಋಣಸಮಾಪನೆಗೊಂಡಿರುವ ಕುಂಬಾರರ ಕರಕುಶಲ ಕೈಗಾರಿಕಾ ಸಹಕಾರ ಸಂಘ ನಿ., ಬೈರಕೂರು, ಮುಳಬಾಗಿಲು ತಾಲ್ಲೂಕು ಈ ಸಂಘದ ನೋಂದಣಿಯನ್ನು ರದ್ದುಪಡಿಸುವ ಬಗ್ಗೆ.

**ಉಲ್ಲೇಖ:** 1) ಈ ಕಛೇರಿಯ ಆದೇಶದ ಸಮಸಂಖ್ಯೆ : ಡಿಆರ್‌ಕೆ/ಎಲ್‌ಕ್ಯೂಡಿ/36/1998–99 ದಿನಾಂಕ: 20–8–1998.

2) ಸಹಕಾರ ಅಭಿವೃದ್ಧಿ ಅಧಿಕಾರಿ, ಮುಳಬಾಗಿಲು ಪ್ರಸ್ತಾವೆ ದಿನಾಂಕ:05–3–2012.

3) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಇವರ ಪತ್ರದ ಸಂಖ್ಯೆ: ಎಆರ್/49/ಸಮಾಪನೆ/ ಸಿಆರ್.10/2011–12 ದಿನಾಂಕ: 31–3–2012.

**ಪ್ರಸ್ತಾವನೆ :–**

ಋಣಸಮಾಪನೆಗೊಂಡಿರುವ ಕುಂಬಾರರ ಕರಕುಶಲ ಕೈಗಾರಿಕಾ ಸಹಕಾರ ಸಂಘ ನಿ., ಬೈರಕೂರು, ಮುಳಬಾಗಿಲು ತಾಲ್ಲೂಕು ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಇವರ ಆದೇಶ ಸಂಖ್ಯೆ: ಎಆರ್‌ಕೆ/ 626/1960–61 ದಿನಾಂಕ: 4–6–1960 ರಂತೆ ನೋಂದಣಿಯಾಗಿರುತ್ತದೆ. ಈ ಸಹಕಾರ ಸಂಘವು ಉದ್ದೇಶಿತ ಬೈಲಾ, ಸಹಕಾರ ಸಂಘಗಳ ಕಾಯ್ದೆ ರೀತ್ಯಾ ಹಾಗೂ ಸಂಘದ ಸದಸ್ಯರ ಹಿತದೃಷ್ಟಿಯಿಂದ ಸಂಘವು ಕಾರ್ಯನಿರ್ವಹಿಸದೆ, ಕೆಲವು ವರ್ಷಗಳಿಂದ ಸ್ಥಗಿತಗೊಂಡ ಪ್ರಯುಕ್ತ, ಈ ಕಛೇರಿಯ ಉಲ್ಲೇಖ (1) ರ ಆದೇಶದಲ್ಲಿ ಈ ಸಂಘವನ್ನು ಋಣಸಮಾಪನೆಗೊಳಿಸಿ, ಸಹಕಾರ ಅಭಿವೃದ್ಧಿ ಅಧಿಕಾರಿ, ಮುಳಬಾಗಿಲು ತಾಲ್ಲೂಕು ಇವರನ್ನು ಸಮಾಪನಾಧಿಕಾರಿನ್ನಾಗಿ ನೇಮಿಸಲಾಗಿತ್ತು.

ಉಲ್ಲೇಖ (2) ರಲ್ಲಿ ಸಹಕಾರ ಅಭಿವೃದ್ಧಿ ಅಧಿಕಾರಿ, ಮುಳಬಾಗಿಲು ತಾಲ್ಲೂಕು ಹಾಗೂ ಸಂಘದ ಸಮಾಪನಾಧಿಕಾರಿಯವರು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರರವರಿಗೆ ವರದಿ ಸಲ್ಲಿಸಿ, ಸಂಘವು ಸುಮಾರು ವರ್ಷಗಳಿಂದ ಯಾವುದೇ ಕೆಲಸ ನಿರ್ವಹಿಸದೇ ಸ್ಥಗಿತಗೊಂಡಿದ್ದು, ಸಂಘದ ಯಾವುದೇ ಪುಸ್ತಕಗಳು ಲಭ್ಯವಿಲ್ಲದ ಕಾರಣ ಸಮಾಪನಾಧಿಕಾರಿಯು ಸ್ವಯಂ ಪ್ರಭಾರವನ್ನು ವಹಿಸಿಕೊಂಡಿರುವುದಾಗಿ, ಸಂಘದ ಪುನ:ಶ್ಚೇತನಕ್ಕೆ ಯಾವುದೇ ರಹಾ ಇಲ್ಲದ ಕಾರಣ ಈ ಸಂಘದ ನೋಂದಣಿಯನ್ನು ರದ್ದುಪಡಿಸಬೇಕೆಂದು ಕೋರಿ, ದಿನಾಂಕ: 05–3–2012 ರಂದು ನಡೆದ ಸಮಾಪನಾಧಿಕಾರಿಗಳ ಸಭೆಯಲ್ಲಿ ಸಮಾಪನಾಧಿಕಾರಿಗಳು ಕೈಗೊಂಡ ತೀರ್ಮಾನದ ನಡವಳಿಕೆಗಳನ್ನು ಮತ್ತು ಸಂಘದ ಶೂನ್ಯ ಆಸ್ತಿ–ಜವಾಬ್ಧಾರಿ ತ:ಖ್ತೆಯನ್ನು ಸಲ್ಲಿಸಿರುತ್ತಾರೆ. ಉಲ್ಲೇಖ (3) ರಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರರವರು ಸದರಿ ಅಧಿಕಾರಿಗಳ ಪ್ರಸ್ತಾವೆಯೊಂದಿಗೆ ನೋಂದಣಿ ರದ್ಧತಿಗಾಗಿ ಶಿಫಾರಸ್ಸು ಮಾಡಿರುತ್ತಾರೆ.

ಈ ರೀತಿ ಸಮಾಪನಾ ಸಂಘದ ಆಸ್ತಿ ಮತ್ತು ಜವಾಬ್ಧಾರಿಯನ್ನು ವಿಲೇವಾರಿ ಮಾಡಿರುವುದರಿಂದ ಹಾಗೂ ಸಂಘವನ್ನು ಮುಂದುವರೆಸಿಕೊಂಡು ಹೋಗುವುದರಿಂದ ಯಾವುದೇ ಪ್ರಯೋಜನ ಇಲ್ಲದೇ ಇರುವುದರಿಂದ ಸಹಕಾರ ಸಂಘಗಳ ಸಹಾಯಕ ನಿಬಂಧಕರು,ಕೋಲಾರ ಇವರ ಶಿಫಾರಸ್ಸನ್ನು ಪರಿಗಣಿಸಿ ಈ ಸಂಘದ ನೋಂದಣಿಯನ್ನು ರದ್ದುಪಡಿಸಲು ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

### ಆದೇಶ

**ನಂ: ಡಿಆರ್‌ಕೆ/ಎಲ್‌ಕ್ಯೂಡಿ/ಸಿಆರ್./36/1998–99, ದಿನಾಂಕ: 31–3–2012**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/ಸಿಎಲ್‌ಎಂ/2001 ದಿನಾಂಕ: 21–11–2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಕೆ.ಎಲ್.ನರಸಿಂಹಮೂರ್ತಿ, ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಆದ ನಾನು ಋಣಸಮಾಪನೆಗೊಂಡಿರುವ ಕುಂಬಾರರ ಕರಕುಶಲ ಕೈಗಾರಿಕಾ ಸಹಕಾರ ಸಂಘ ನಿ., ಬೈರಕೂರು, ಮುಳಬಾಗಿಲು ತಾಲ್ಲೂಕು ಈ ಸಹಕಾರ ಸಂಘದ ನೋಂದಣಿ ಸಂಖ್ಯೆ: ಎಆರ್‌ಕೆ/ 626/1960–61 ದಿನಾಂಕ: 4–6–1960ನ್ನು ರದ್ದುಗೊಳಿಸಿ, ಸಂಘವನ್ನು ವಿಸರ್ಜಿಸಿ ಆದೇಶಿಸಿದ್ದೇನೆ.

ಈ ಆದೇಶದ ದಿನಾಂಕದಿಂದ ಸದರಿ ಸಂಘವು ಅಸ್ತಿತ್ವದಲ್ಲಿಲ್ಲದೆ ಸಂಪೂರ್ಣವಾಗಿ ವಿಸರ್ಜಿತವಾಗಿದೆ ಎಂದು ಪರಿಗಣಿಸತಕ್ಕದ್ದು.

ಈ ಆದೇಶವನ್ನು ಈ ದಿನ ಅಂದರೆ, ದಿನಾಂಕ: 31–3–2012 ರಂದು ನನ್ನ ಸಹಿ ಹಾಗೂ ಈ ಕಛೇರಿಯ ಮೊಹರಿನೊಂದಿಗೆ ಹೊರಡಿಸಿದೆ.

**ಕೆ.ಎಲ್.ನರಸಿಂಹಮೂರ್ತಿ**
ಸಹಕಾರ ಸಂಘಗಳ ಉಪನಿಬಂಧಕರು,
ಕೋಲಾರ ಜಿಲ್ಲೆ, ಕೋಲಾರ.

**ಪಿ.ಆರ್. 682**

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ

**ಕ್ರ:ಬಿ3:ಅಮೊ:ವಾಹನ:ವಿವ:18/10–11, ದಿನಾಂಕ:07–04–2012**

| | | |
|---|---|---|
| **ಉಪಸ್ಥಿತರು** | :: | ಮನೋಜ್ ಕುಮಾರ್ ತ್ರಿಪಾಠಿ, ಭಾ.ಅ.ಸೇ<br>ಅಧಿಕೃತ ಅಧಿಕಾರಿ ಹಾಗೂ<br>ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ. |
| **ಪಿರ್ಯಾಧಿದಾರರು** | :: | ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ,<br>ಅರಣ್ಯ ಸಂಚಾರಿದಳ, ಶಿಕಾರಿಪುರ<br>(ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ) |
| **ಬಾಧ್ಯತೆದಾರರು** | :: | ಯಾರು ಹಕ್ಕು ಬಾಧ್ಯತೆ ಅರ್ಜಿ ಸಲ್ಲಿಸಿರುವುದಿಲ್ಲ. |

**ಪ್ರಸ್ತಾವನೆ:–**

ದಿ:10–09–2010 ರಂದು ಒಂದು ವಾಹನ ಮಹೇಂದ್ರ ಪಿಕ್‌ಅಪ್ ಕೆಎ–23–7646ರಲ್ಲಿ ಬೀಟೆ ನಾಟಾ ಅಕ್ರಮವಾಗಿ ಸಾಗಿಸುತ್ತಿರುವಾಗ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿದಳ, ಶಿಕಾರಿಪುರ ಇವರು ಪತ್ತೆಹಚ್ಚಿ ಬರೆದ ಮಹಜರ್ ವಿವರ ಈ ಕೆಳಗಿನಂತಿದೆ.

ದಿ: 10–09–2010 ರಂದು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿದಳ, ಶಿಕಾರಿಪುರ ಮತ್ತು ಸಿಬ್ಬಂದಿಯವರು ಶಿಕಾರಿಪುರ ತಾಲ್ಲೂಕಿನ ಶಿಕಾರಿಪುರದಿಂದ ಚೋರಡಿಗೆ ಹೋಗುವ PWD ರಸ್ತೆಯ ಗಾಮಾ ಕ್ರಾಸಿನ ಬಳಿ ರಾತ್ರಿ ಗಸ್ತು ಕಾಯುತ್ತಿರುವಾಗ ಸುಮಾರು ಬೆಳಗಿನ ಜಾವ 5–30ರ ಸಮಯದಲ್ಲಿ ಒಂದು ವಾಹನ ಅಂಬ್ಲಿಗೊಳ ಕಡೆಯಿಂದ ಬರುತ್ತಿರುವುದನ್ನು ಬ್ಯಾಟರಿ ಬೆಳಕಿನ ಸಹಾಯದಿಂದ ನಿಲ್ಲಿಸಲು ಸೂಚಿಸಿದರು. ವಾಹನ ನಿಲ್ಲಿಸದೇ ವೇಗವಾಗಿ ಮುಂದೆ ಚಲಿಸಿರುತ್ತದೆ. ಈ ವಾಹನವನ್ನು ಇಲಾಖಾ ವಾಹನದಿಂದ ಬೆನ್ನಟ್ಟಿ ಗಾಮಾ ಕ್ರಾಸ್‌ನ ಬಳಿ ನಿಲ್ಲಿಸಲಾಯಿತು. ವಾಹನದಲ್ಲಿದ್ದ ಆಸಾಮಿಗಳು ವಾಹನದಿಂದ ಇಳಿದು ಕೈಗೇ ಸಿಗದೇ ಪರಾರಿಯಾದರು. ವಾಹನ ಪರಿಶೀಲಿಸಲಾಗಿ ಮಹೇಂದ್ರ ಪಿಕ್‌ಅಪ್ ಕೆಎ–23–7646, ಛಾಸ್ಸಿಸ್ ನಂ: MAIRC2ACAI2445397 & ಇಂಜಿನ್ ನಂ: ACIIF56190 ಆಗಿರುತ್ತದೆ. ವಾಹನದೊಳಗಡೆ ಬೀಟೆ ಜಾತಿಯ 05 ತುಂಡುಗಳಿರುತ್ತದೆ. ಈ 05 ತುಂಡುಗಳನ್ನು ಅಳತೆ ಮಾಡಲಾಗಿ 0.762 ಎಂ3 ಪ್ರಮಾಣವಿರುತ್ತದೆ. ಈ ತುಂಡುಗಳ ಮೇಲೆ ಇಲಾಖೆಯ ಯಾವುದೇ ಛಾಪಾದ ಗುರುತಿರಲಿಲ್ಲ. ಇದನ್ನು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಪ್ರಥಮ ವರ್ತಮಾನ ವರದಿ, ಮಹಜರ್ ವರದಿ ಮತ್ತು ಜಪ್ತು ವರದಿಯೊಂದಿಗೆ ಇಲಾಖಾ ಪರ ವಶಪಡಿಸಿಕೊಂಡು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 24, 62, 71(ಎ), 104(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ಉಪನಿಯಮ 144, 165ರ ಪ್ರಕಾರ ಅ.ಮೊ.ಸಂಖ್ಯೆ 31/10–11ನ್ನು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿದಳ, ಶಿಕಾರಿಪುರ ಇವರು ದಾಖಲಿಸಿರುತ್ತಾರೆ. ನಂತರ ಈ ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ವಾಹನವನ್ನು ಸುರಕ್ಷತೆಗಾಗಿಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ಈ ನ್ಯಾಯಾಲಯದಿಂದ ಆದೇಶವಾಗಿದೆ.

ಈ ವಾಹನದ 'ಬಿ' ಎಕ್ಸ್‌ಟ್ರ್ಯಾಕ್ಟನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಈ ನ್ಯಾಯಾಲಯದಿಂದ ಬಿ3–ಅಮೊ–ವಾಹನ–ವಿವ–18/10–11 ದಿ:26–04–2011ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿ, ರಾಣೆಬೆನ್ನೂರು ಇವರಿಗೆ ಪತ್ರ ಬರೆದು ಕೋರಲಾಯಿತು. ಈ ವಾಹನದ ಸಿ.ಸಿ.ಯನ್ನು ಪ್ರಾದೇಶಿಕ ಸಾರಿಗೆ ಅಧಿಕಾರಿ, ಕೊಪ್ಪಳಕ್ಕೆ ದಿ:06–08–2005ರಲ್ಲಿ ವರ್ಗಾಯಿಸಿದ ಬಗ್ಗೆ ದಿ:11–05–2011ರ ಪತ್ರದಲ್ಲಿ ಈ ನ್ಯಾಯಾಲಯಕ್ಕೆ ತಿಳಿಸಿರುತ್ತಾರೆ.

ಈ ವಾಹನದ 'ಬಿ' ಎಕ್ಸ್‌ಟ್ರ್ಯಾಕ್ಟನನ್ನು ಪ್ರಾದೇಶಿಕ ಸಾರಿಗೆ ಅಧಿಕಾರಿ, ಪುತ್ತೂರಿನಿಂದ ಈ ಪ್ರಕರಣದ ತನಿಖಾಧಿಕಾರಿ ದಿ:07–02–2011 ರಂದು ಪಡೆದು ಈ ನ್ಯಾಯಾಲಯಕ್ಕೆ ದಿ:25–04–2011 ರಂದು ಸಲ್ಲಿಸಿರುತ್ತಾರೆ. 'ಬಿ' ಎಕ್ಸ್‌ಟ್ರ್ಯಾಕ್ಟನಲ್ಲಿ ನಮೂದಿಸಿದ ಆರ್.ಸಿ. ಮಾಲೀಕರ ಹೆಸರು ಶ್ರೀ ಕೃಷ್ಣಪ್ಪ ಬಿನ್ ಓ.ಅನ್ನಿಪೂಜಾರಿ, ಮನೆ ನಂ. 01–142, ಮರಡಿ ಅಂಚೆ, ಮತ್ತು ವಾಸಿ, ಬೆಳ್ತಂಗಡಿ ಎಂದಿರುತ್ತದೆ. ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಬಿ)(1)ರ ಪ್ರಕಾರ ಆರ್.ಸಿ. ಮಾಲೀಕರಿಗೆ ಈ ನ್ಯಾಯಾಲಯದಿಂದ ದಿ:05–07–2011 ರಂದು ನೊಂದಣಿ ಅಂಚೆ ಮೂಲಕ ನೋಟಿಸ್ ಜಾರಿ ಮಾಡಿದೆ. ಲಕೋಟೆ ಮೇಲೆ ಅಂಚೆ ಇಲಾಖೆಯವರು "ಈ ವಿಳಾಸದವರು ತೆಗೆದುಕೊಳ್ಳಲು ಬಾರದ ಕಾರಣ ಸೆಂಡರ್‌ಗೆ ಮರು ರವಾನಿಸಿದೆ" ಎಂದು ನಮೂದಿಸಿ ಈ ನ್ಯಾಯಾಲಯಕ್ಕೆ ಹಿಂದಿರುಗಿಸುತ್ತಾರೆ.

ಈ ನಡುವೆ ಈ ವಾಹನದ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ ಬಿ3–ಅಮೊ–ವಾಹನ–ವಿವ–24/10–11 ದಿ:11–10–2010 ರಂದು ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಬೆಂಗಳೂರು ಮತ್ತು ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ಗೆಜೆಟ್ ಮತ್ತು ದಿನಪ್ರತಿಕೆಯಲ್ಲಿ ಪ್ರಕಟಿಸಲು ಕೋರಲಾಯಿತು. ಅದರಂತೆ, ದಿ:24–10–2010ರ ಸಾಗರ ವಾರ್ತೆ ದಿನಪತ್ರಿಕೆಯಲ್ಲಿ ಮತ್ತು ದಿ:04–11–2010 ರಂದು ರಾಜ್ಯ ಗೆಜೆಟ್ ಪತ್ರಿಕೆಯಲ್ಲಿ ಈ ಪ್ರಕಟಣೆಯು ಪ್ರಕಟಗೊಂಡಿರುತ್ತದೆ. ಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ವಾಹನ ಮಾಲೀಕರಿರಾಗಲೀ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಕ್ಲೇಮು ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

ಸಹಾಯಕ ಸರ್ಕಾರಿ ಅಭಿಯೋಜಕರು ದಿ:03–03–2012 ರಂದು ವಾದ ಮಂಡಿಸಿ, ಸದರಿ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಸಾಗಿಸುತ್ತಿರುವಾಗ ಮಾಲು ಸಹಿತ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿದಳ, ಶಿಕಾರಿಪುರ ಮತ್ತು ಸಿಬ್ಬಂದಿಯವರು ಪತ್ತೆಹಚ್ಚಿ ಕ್ರಿಮಿನಲ್ ಕೇಸ್ ದಾಖಲಿಸಿರುತ್ತಾರೆ. ಕೇಸ್ ದಾಖಲಿಸಿದ ಬಗ್ಗೆ ಪ್ರಥಮ ವರ್ತಮಾನ ವರದಿ, ಜಪ್ತಿ ವರದಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಇದರಿಂದ ಈ ವಾಹನದಲ್ಲಿ ಬೀಟೆ ನಾಟಾಗಳನ್ನು ಅಕ್ರಮವಾಗಿ ಸಾಗಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

**ಈ ಪ್ರಕರಣದಲ್ಲಿ ನಿರ್ಧರಿಸಬೇಕಾದ ಅಂಶಗಳು ಈ ಕೆಳಗಿನಂತಿದೆ.**

1. ಮಹೇಂದ್ರ ಪಿಕ್‌ಅಫ್ ವಾಹನ ಕೆಎ–23–7646 ರಲ್ಲಿ ಅರಣ್ಯ ಉತ್ಪನ್ನವಾದ ಬೀಟೆ ನಾಟಾ 05=0.762 ಎಂ3ನ್ನು ದಿ:10–09–2010ರಂದು ಅಕ್ರಮವಾಗಿ ಸಾಗಿಸಲು ಉಪಯೋಗಿಸಲಾಗಿತ್ತೇ? ಹಾಗೂ ಈ ರೀತಿ ಸಾಗಿಸುವ ಮುಖಾಂತರ ಅರಣ್ಯ ಅಪರಾಧವೆಸಗಿ ಕರ್ನಾಟಕ ಅರಣ್ಯ ಕಾಯಿದೆ ಮತ್ತು ನಿಯಮವನ್ನು ಉಲ್ಲಂಘಿಸಲಾಗಿದೆಯೇ?

2. ಕರ್ನಾಟಕ ಅರಣ್ಯ ವಿಧಿ 71(ಬಿ)(1)ರ ಪ್ರಕಾರ ವಾಹನದ ಮಾಲೀಕರಿಗೆ ಕಾರಣ ಕೇಳಿ ನೋಟಿಸ್ ನೀಡಲಾಗಿದೆಯೇ? ಹಾಗೂ ಮಾಲೀಕರವರಿಗೆ ಅವರ ಅಹವಾಲನ್ನು ಮಂಡಿಸಿ ಸಮರ್ಥಿಸಿಕೊಳ್ಳಲು ಸಾಕಷ್ಟು ಅವಕಾಶವನ್ನು ನೀಡಲಾಗಿದೆಯೇ?

3. ವಾಹನದ ಮಾಲೀಕರು ಅಥವಾ ಅವರ ವಾಹನ ಚಾಲಕನಾಗಲೀ ಅಥವಾ ಅವರ ಪ್ರತಿನಿಧಿಯಾಗಲೀ ಸದರಿ ವಾಹನದಲ್ಲಿ ಅಕ್ರಮವಾಗಿ ಸರ್ಕಾರದ ಸ್ವತ್ತಾದ ಬೀಟೆ ನಾಟಾವನ್ನು ಸಾಗಿಸಲು ಶಾಮಿಲಾಗಿದ್ದಾರೆಯೇ? ಹಾಗೂ ಈ ವಾಹನವನ್ನು ಇಂತಹ ಅಕ್ರಮ ಕಾನೂನು ಬಾಹಿರ ಅರಣ್ಯ ಉತ್ಪನ್ನ ಸಾಗಾಣಿಕೆಗೆ ಉಪಯೋಗಿಸದಂತೆ ವಾಹನದ ಮಾಲೀಕರು, ವಾಹನದ ಚಾಲಕರು ಅಥವಾ ಅವರ ಪ್ರತಿನಿಧಿಗಳು ಸಾಕಷ್ಟು ಸೂಕ್ತ ಮುನ್ನೆಚ್ಚರಿಗೆ ತೆಗೆದುಕೊಂಡಿರುತ್ತಾರೆಯೇ?

4. ತೀರ್ಮಾನಕ್ಕೆ ಬರಬಹುದಾಗಿದೆ.

ಈ ಮೇಲಿನ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸಿ ಈ ಕೆಳಗಿನಂತೆ ತೀರ್ಮಾನಕ್ಕೆ ಬರಲಾಗಿದೆ, ಅದಕ್ಕೆ ಕಾರಣಗಳು ಈ ಕೆಳಗಿನಂತೆ ನೀಡಲಾಗಿದೆ.

1. ಒಂದನೇ ಅಂಶಕ್ಕೆ ಹೌದು ಎಂತಲೂ
2. ಎರಡನೇ ಅಂಶಕ್ಕೆ ಹೌದು ಎಂತಲೂ
3. ಮೂರನೇ ಅಂಶಕ್ಕೆ ಈ ಕೆಳಗಿನಂತೆ ವಿವರಿಸಿದೆ.

**ಅಂಶ–1:**

ದಿ:10–09–2010 ರಂದು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿದಳ, ಶಿಕಾರಿಪುರ ಮತ್ತು ಸಿಬ್ಬಂದಿಯವರು ಶಿಕಾರಿಪುರ ತಾಲ್ಲೂಕಿನ ಶಿಕಾರಿಪುರದಿಂದ ಚೋರಡಿಗೆ ಹೋಗುವ PWD ರಸ್ತೆಯ ಗಾಮಾ ಕ್ರಾಸಿನ ಬಳಿ ರಾತ್ರಿ ಗಸ್ತು ಕಾಯುತ್ತಿರುವಾಗ ಸುಮಾರು ಬೆಳಗಿನ ಜಾವ 5–30ರ ಸಮಯದಲ್ಲಿ ಮಹೇಂದ್ರ ಪಿಕ್‌ಅಫ್ ವಾಹನ ಕೆಎ–23–7646 ರಲ್ಲಿ ಬೀಟೆ ನಾಟಾ 05=0.762 ಎಂ3ನ್ನು ಅಕ್ರಮವಾಗಿ ಸಾಗಿಸುತ್ತಿರುವ ಬಗ್ಗೆ ಪತ್ತೆಹಚ್ಚಿ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಇಲಾಖಾಪರ ವಶಪಡಿಸಿಕೊಂಡು ಪ್ರಥಮ ವರ್ತಮಾನ ವರದಿ, ಜಪ್ತು ವರದಿ, ಮಹಜರ್ ವರದಿ ಸಾಕ್ಷಿಗಳ ಸಹಿಯೊಂದಿಗೆ ಕೇಸ್ ದಾಖಲಿಸಿ ನಂತರ ದಾಖಲೆಗಳೊಂದಿಗೆ ವಾಹನ ಮತ್ತು ಬೀಟೆ ನಾಟಾವನ್ನು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿದಳ, ಶಿಕಾರಿಪುರ ಇವರು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಇದರಿಂದ ಈ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಿದ್ದರಿಂದ ಕರ್ನಾಟಕ ಅರಣ್ಯ ಕಾಯಿದೆ ಮತ್ತು ಕಾನೂನನ್ನು ಉಲ್ಲಂಘಿಸಿರುತ್ತಾರೆಂದು ನನ್ನ ಉತ್ತರವಾಗಿದೆ.

**ಅಂಶ–2:**

'ಬಿ' ಎಕ್ಸ್‌ಟ್ರ್ಯಾಕ್ಟ್‌ನಲ್ಲಿ ಆರ್.ಸಿ. ಮಾಲೀಕರ ಹೆಸರು & ವಿಳಾಸ ನಮೂದಿಸಿದಂತೆ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71ಬಿ (1)ರ ಪ್ರಕಾರ ಕಾರಣ ಕೇಳಿ ಪತ್ರವನ್ನು ದಿ:05–07–2011 ರಂದು ಅಂಚೆ ಮೂಲಕ ಜಾರಿ ಮಾಡಿದ ಲಕೋಟೆ ಮೇಲೆ ಅಂಚೆ ಇಲಾಖೆಯವರು "ಈ ವಿಳಾಸದವರು ತೆಗೆದುಕೊಳ್ಳಲು ಬಾರದ ಕಾರಣ ಸೆಂಡರ್‌ಗೆ ಮರು ರವಾನಿಸಿದೆ" ಎಂದು ನಮೂದಿಸಿ ಈ ನ್ಯಾಯಾಲಯಕ್ಕೆ ಹಿಂದಿರುಗಿಸುತ್ತಾರೆ. ಈ ವಾಹನದ ಬಗ್ಗೆ ಪೇಪರ್ ಪ್ರಕಟಣೆ ಈ ನ್ಯಾಯಾಲಯದಿಂದ ದಿ:11–10–2011 ರಂದು ಹೊರಡಿಸಿರುತ್ತದೆ. ಸದರಿ ಪ್ರಕಟಣೆಯು

ದಿ: 24–10–2011 ರಂದು ಸಾಗರ ವಾರ್ತೆ ದಿನಪತ್ರಿಕೆಯಲ್ಲಿ ಮತ್ತು ದಿ:04–11–2010 ರಂದು ರಾಜ್ಯ ಗೆಜೆಟ್ ಪತ್ರಿಕೆಯಲ್ಲಿ ಪ್ರಕಟಗೊಂಡಿರುತ್ತದೆ. ಸದರಿ ಪ್ರಕಟಣೆ ದಿನಪತ್ರಿಕೆಯಲ್ಲಿ ಮತ್ತು ರಾಜ್ಯ ಗೆಜೆಟ್ ಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ಆರ್.ಸಿ. ಮಾಲೀಕರು ವಾಹನ ಬಿಡಿಸಿಕೊಳ್ಳುವ ಬಗ್ಗೆ ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುವುದಿಲ್ಲ. ಇದರಿಂದ ಆರ್.ಸಿ. ಮಾಲೀಕರಿಗೆ ತಮ್ಮ ಅಹವಾಲನ್ನು ಮಂಡಿಸಲು ಈ ನ್ಯಾಯಾಲಯ ಸೂಕ್ತ ಕಾಲಾವಕಾಶ ನೀಡಿದೆ ಎಂಬುದು ನನ್ನ ಉತ್ತರವಾಗಿದೆ.

**ಅಂಶ–3:**

ದಿ:10–09–2010 ರಂದು ಮಹೇಂದ್ರ ಪಿಕ್‌ಅಫ್ ವಾಹನ ಕೆಎ–23–7646 ರಲ್ಲಿ ಬೀಟೆ ನಾಟಾ 05=0.762 ಎಂ3ರಲ್ಲಿ ಅಕ್ರಮವಾಗಿ ಸಾಗಿಸುತ್ತಿದ್ದಾಗ, ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿದಳ, ಶಿಕಾರಿಪುರ ಮತ್ತು ಸಿಬ್ಬಂದಿಯವರು ಪತ್ತೆಹಚ್ಚಿ ಪ್ರಥಮ ವರ್ತಮಾನ ವರದಿ, ಜಪ್ತಿ ವರದಿ, ಮಹಜರ್ ವರದಿಯನ್ನು ಸಾಕ್ಷಿಗಳ ಸಹಿಯೊಂದಿಗೆ ಸಾಕ್ಷಿಗಳ ಸಹಿಯೊಂದಿಗೆ ಕೇಸ್ ದಾಖಲಿಸಿ ನಂತರ ದಾಖಲೆಗಳೊಂದಿಗೆ ವಿಚಾರಣಾ ವರದಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿ, ಜಪ್ತಾದ ವಾಹನ ಮತ್ತು ವಾಹನದಲ್ಲಿದ್ದ ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಆದರೆ, ಬೀಟೆ ನಾಟಾ ಅಕ್ರಮವಾಗಿ ದಿ:10–09–2010 ರಂದು ಸಾಗಿಸಿದ ಸಮಯದಲ್ಲಿ ಸದರಿ ವಾಹನವು ಶ್ರೀ ಕೃಷ್ಣಪ್ಪ ಬಿನ್ ಓ.ಅನ್ನಿಪೂಜಾರಿ, ಮನೆ ನಂ. 01–142, ಮರಡಿ ಅಂಚೆ, ಮತ್ತು ವಾಸಿ, ಬೆಳ್ತಂಗಡಿ ಇವರ ಹೆಸರಿನಲ್ಲಿ ನೊಂದಣಿಯಾಗಿರುತ್ತದೆ. ಆದ್ದರಿಂದ ಇವರನ್ನೇ ಸದರಿ ವಾಹನದ ಮಾಲೀಕರೆಂದು ಪರಿಗಣಿಸಲಾಗಿದೆ. ಅಲ್ಲದೇ ಆರ್.ಸಿ. ಮಾಲೀಕರು ಮುಗ್ಧರೆನ್ನುವುದಕ್ಕಾಗಲೀ, ವಾಹನ ಮಾಲೀಕರ ಗಮನಕ್ಕೆ ಬಾರದೇ ಈ ಕೃತ್ಯ ನಡೆದಿದೆನ್ನುವುದಕ್ಕಾಗಲೀ, ಈ ಪ್ರಕರಣದಲ್ಲಿ ಅರ್ಜಿದಾರರು ಭಾಗಿಯಾಗಿಲ್ಲವೆನ್ನುವುದಕ್ಕಾಗಲೀ, ಈ ಬಗ್ಗೆ ವಿಚಾರಣಾ ಸಮಯದಲ್ಲಿ ಈ ನ್ಯಾಯಾಲಯಕ್ಕೆ ಸಾಭೀತುಪಡಿಸಿರುವುದಿಲ್ಲ.

ಅಲ್ಲದೇ, ವಾಹನ ಮಾಲೀಕರಾಗಲೀ, ಅವರ ಪರ ಚಾಲಕರಾಗಲೀ ಅಥವಾ ಅವರ ಪ್ರತಿನಿಧಿಗಳಾಗಲೀ ವಾಹನದಲ್ಲಿ ಕಳ್ಳ ಸಾಗಾಣಿಕೆಯಾಗದಂತೆ ಮುನ್ನಚ್ಚರಿಕೆ ಕ್ರಮವಹಿಸಬೇಕಾಗಿರುತ್ತದೆ. ಈ ಬಗ್ಗೆ ಗೌರವನ್ವಿತ ಮಾನ್ಯ ಉಚ್ಚ ನ್ಯಾಯಾಲಯ ಕರ್ನಾಟಕವು ಈ ಕೆಳಗಿನಂತೆ ಆದೇಶ ನೀಡಿರುವುದನ್ನು ಉಲ್ಲೇಖಿಸುತ್ತಾ,

The Hon'ble high Court of Karnataka Bangalore in the case of-Ramesh N. Dixit V/S State of Karnataka, 1987 (2) Kar.L.j.Sh.N.278:ILR 1985 Kar.2571 held that *"the owners required to show under sub-section (2) of section 71-B is that he, his agent, if any and the person in charge of the vehicle (In this case the driver) each, had taken all reasonable and necessary precautions against the misusing of the vehicle and that this offence had been committed without the knowledge or connivance any of them. ……………………………………………………………………It is not merely enough if the truck owner says that his truck had been misused without his knowledge or connivance, but in addition he is bound to show that he had taken all reasonable and necessary precautions against such misuse".*

ಪ್ರಸ್ತುತ ಪ್ರಕರಣದಲ್ಲಿ ವಾಹನ ಮಾಲೀಕರಾಗಲೀ, ಅವರ ಪ್ರತಿನಿಧಿಗಳಾಗಲೀ ಮತ್ತು ಚಾಲಕರಾಗಲೀ ಈ ವಾಹನದಲ್ಲಿ ಅಕ್ರಮವಾಗಿ ಅರಣ್ಯ ಉತ್ಪನ್ನವನ್ನು ಸಾಗಿಸದಂತೆ ಯಾವುದೇ ಮುನ್ನೆಚ್ಚರಿಕೆ ಕ್ರಮ ತೆಗೆದುಕೊಂಡ ಬಗ್ಗೆ ವಿಚಾರಣಾ ಸಮಯದಲ್ಲಿ ಈ ನ್ಯಾಯಾಲಯಕ್ಕೆ ಸಾಭೀತುಪಡಿಸಿರುವುದಿಲ್ಲ.

**ಅಂಶ–4:**

ಈ ಮೇಲಿನ ಅಂಶಗಳನ್ನು ಸೂಕ್ಷ್ಮವಾಗಿ ಗಮನಿಸಿ ಮತ್ತು ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು, ವಾದವನ್ನು ಕೇಳಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಮನೋಜ್ ಕುಮಾರ್ ತ್ರಿಪಾಠಿ, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಅರಣ್ಯ ಮೊಕದ್ದಮೆಯಲ್ಲಿ ಜಪ್ತು ಮಾಡಿದ ವಾಹನ ಮಹೇಂದ್ರ ಪಿಕ್‌ಅಪ್ ಕೆಎ–23–7646 (ಛಾಸ್ಸಿಸ್ ನಂ: MAIRC2ACAI2445397 & ಇಂಜಿನ್ ನಂ: ACIIF56190) ಮತ್ತು ಈ ವಾಹನದಲ್ಲಿದ್ದ, 05 ತುಂಡು ಬೀಟೆ 0.762 ಎಂ3ನ್ನು ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದ್ದೇನೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ:07–04–2012 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ

**ಪಿ.ಆರ್. 721**

## ಉಪನಿರ್ದೇಶಕರವರ ಕಾರ್ಯಾಲಯ, ಸಾರ್ವಜನಿಕ ಶಿಕ್ಷಣ ಇಲಾಖೆ, ದಾವಣಗೆರೆ ಜಿಲ್ಲೆ, ದಾವಣಗೆರೆ

**ಸಂ: ಆ3. ದೂರು ಸಿ.ಸಿ.ಎ. 23/2007-08 ದಿನಾಂಕ: 21-05-2012**

### ಅಧಿಕೃತ ಜ್ಞಾಪನ

**ವಿಷಯ:** ಶ್ರೀ.ಆರ್.ಸ್ವಾಮಿ, ದ್ವಿತೀಯ ದರ್ಜೆ ಸಹಾಯಕರು, ಧ.ರಾ.ಮ. ಸರ್ಕಾರಿ ಪದವಿ ಪೂರ್ವ ಕಾಲೇಜು, ಹರಿಹರ, ಹರಿಹರ ತಾಲ್ಲೂಕು, ಇವರ ಅನಧೀಕೃತ ಗೈರುಹಾಜರಿ ಬಗ್ಗೆ.

**ಉಲ್ಲೇಖ:**
1) ಕ್ಷೇತ್ರ ಶಿಕ್ಷಣಾಧಿಕಾರಿಗಳು, ಹರಿಹರ ರವರ ಪತ್ರ ಸಂಖ್ಯೆ: ಸಿ4 ಅ.ಗೈ.ಹಾ. 57/07-08, ದಿನಾಂಕ: 11-1-2008
2) ಈ ಕಛೇರಿಯ ಕಾರಣ ಕೇಳಿ ನೋಟೀಸ್ ಪತ್ರ ಸಮ ಸಂಖ್ಯೆ ದಿನಾಂಕ: 21-01-2008
3) ಈ ಕಛೇರಿಯ ನೋಟೀಸ್ ಪತ್ರ ಸಮ ಸಂಖ್ಯೆ ದಿನಾಂಕ: 08-04-2008
4) ಈ ಕಛೇರಿಯ ನೆನಪೋಲೆ ಪತ್ರ ಸಮ ಸಂಖ್ಯೆ ದಿನಾಂಕ: 21-11-2009
5) ಉಪ ಪ್ರಾಚಾರ್ಯರು, ಡಿ.ಆರ್.ಎಂ.ಸರ್ಕಾರಿ ಪದವಿ ಪೂರ್ವಕಾಲೇಜು,ಹರಿಹರ ರವರ ಪತ್ರ ಸಂಖ್ಯೆ: 34/2010-11 ದಿನಾಂಕ: 23-7-2010
6) ಈ ಕಛೇರಿಯ ಕಾರಣ ಕೇಳಿ ನೋಟೀಸ್ ಪತ್ರ ಸಮ ಸಂಖ್ಯೆ ದಿನಾಂಕ: 07-08-2010
7) ಶ್ರೀ.ಆರ್.ಸ್ವಾಮಿ, ದ್ವಿ.ದ.ಸ. ಇವರ ಮನವಿ ಪತ್ರ ದಿನಾಂಕ: 25-8-2010
8) ಈ ಕಛೇರಿಯ ಆದೇಶ ಸಮ ಸಂಖ್ಯೆ ದಿನಾಂಕ: 01-09-2010
9) ಈ ಕಛೇರಿಯ ಪತ್ರ ಸಮ ಸಂಖ್ಯೆ ದಿನಾಂಕ: 05-01-2011
10) ಉಪ ಪ್ರಾಚಾರ್ಯರು, ಡಿ.ಆರ್.ಎಂ.ಸ.ಪ.ಪೂ.ಕಾಲೇಜು ಹರಿಹರ ಇವರ ಪತ್ರ ಸಂಖ್ಯೆ: 114/2010-11 ದಿನಾಂಕ: 27-01-2011
11) ಈ ಕಛೇರಿಯ ನೋಟೀಸ್ ಪತ್ರ ಸಮ ಸಂಖ್ಯೆ ದಿನಾಂಕ: 03-03-2011
12) ಉಪ ಪ್ರಾಚಾರ್ಯರು, ಡಿ.ಆರ್.ಎಂ.ಸ.ಪ.ಪೂ.ಕಾಲೇಜು ಹರಿಹರ ಇವರ ಪತ್ರ ಸಂಖ್ಯೆ: 16/2011-12 ದಿನಾಂಕ: 10-06-2011
13) ಈ ಕಛೇರಿಯ ಆದೇಶ ಪತ್ರ ಸಮ ಸಂಖ್ಯೆ ದಿನಾಂಕ: 15-9-2011
14) ಈ ಕಛೇರಿಯ ಆದೇಶ ಪತ್ರ ಸಮ ಸಂಖ್ಯೆ ದಿನಾಂಕ: 22-9-2011
15) ವಿಚಾರಣಾಧಿಕಾರಿಗಳ ವರದಿ ದಿನಾಂಕ: 16-11-2011
16) ಈ ಕಛೇರಿಯ ಎರಡನೇ ನೋಟೀಸ್ ಪತ್ರ ಸಮ ಸಂಖ್ಯೆ ದಿನಾಂಕ:19-11-2011
17) ಶ್ರೀ.ಆರ್.ಸ್ವಾಮಿ, ದ್ವಿ.ದ.ಸಹಾಯಕರು ಇವರ ಹೇಳಿಕೆ ದಿನಾಂಕ: 29-11-2011
18) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 18 ಸೇ.ಇ.ವಿ. 2001, ಬೆಂಗಳೂರು, ದಿನಾಂಕ: 14-09-2001

**ಪ್ರಸ್ತಾವನೆ:**

ಶ್ರೀ ಆರ್. ಸ್ವಾಮಿ, ದ್ವಿತೀಯ ದರ್ಜೆ ಸಹಾಯಕರು, ಧ.ರಾ.ಮ. ಸರ್ಕಾರಿ ಪದವಿ ಪೂರ್ವ ಕಾಲೇಜು, ಹರಿಹರ, ಹರಿಹರ ತಾಲ್ಲೂಕು ಆದ ಇವರು ದಿನಾಂಕ 01-10-2005 ರಿಂದ 24-07-2006, 02-07-2007 ರಿಂದ 17-02-2008, 20-5-2008 ರಿಂದ 14-11-2008, 22-04-2010 ರಿಂದ 01-09-2010 ಮತ್ತು 05-10-2010 ರಿಂದ ಈ ದಿನಾಂಕದವರಗೆ ಯಾವುದೇ ರಜೆ ಅರ್ಜಿಯನ್ನು ಸಲ್ಲಿಸದೇ ಸಕ್ಷಮ ಪ್ರಾಧಿಕಾರಿಗಳಿಂದ ಅನುಮತಿಯನ್ನು ಪಡೆಯದೇ ಹಾಗೂ ಯಾವುದೇ ಮಾಧ್ಯಮದ ಮೂಲಕವಾಗಲೀ ರಜೆಯನ್ನು ಕೋರದೇ ಏಕ ಪಕ್ಷಿಯವಾಗಿ ಕರ್ತವ್ಯದಿಂದ ಅನಧೀಕೃತ ಗೈರುಹಾಜರಾಗಿರುತ್ತಾರೆ. ಸದರಿಯವರನ್ನು ಕರ್ತವ್ಯದ ಮೇಲೆ ಹಾಜರಾಗುವಂತೆ ದಿನಾಂಕ: 20-7-2007, 26-11-2007 ಹಾಗೂ 10-12-2007 ರಲ್ಲಿ ನೊಂದಾಯಿತ ಅಂಚೆ ಮೂಲಕ ಕಳುಹಿಸಲಾಗಿ ಸದರಿ ವಿಳಾಸದಲ್ಲಿ ಲಭ್ಯವಿರುವುದಿಲ್ಲವೆಂದು ಅಂಚೆ ಇಲಾಖೆಯ ಷರಾದೊಂದಿಗೆ ಹಿಂದಿರುಗಿ ಬಂದಿರುತ್ತವೆ, ನೌಕರರು ಉದ್ದೇಶ ಪೂರಕವಾಗಿ ಅನಧೀಕೃತ ಗೈರುಹಾಜರಾಗಿದ್ದು ಶಾಲೆಯ ಕಛೇರಿ ಆಡಳಿತಕ್ಕೆ ತೊಂದರೆ ಯಾಗಿರುತ್ತದೆ ಎಂದು ಉಪಪ್ರಾಚಾರ್ಯರು ಸೂಕ್ತ ಶಿಸ್ತುಕ್ರಮಕ್ಕಾಗಿ ಕ್ಷೇತ್ರ ಶಿಕಕ್ಷಣಾಧಿಕಾರಿಗಳು, ಹರಿಹರ ರವರಿಗೆ ವರದಿ ಮಾಡಿರುತ್ತಾರೆ. ಕ್ಷೇತ್ರ ಶಿಕ್ಷಣಾಧಿಕಾರಿಗಳು, ಹರಿಹರ ರವರು ಉಲ್ಲೇಖ [1]ರ ಪತ್ರದಲ್ಲಿ ಇವರ ಮೇಲೆ ಸೂಕ್ತ ಶಿಸ್ತುಕ್ರಮಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಉಲ್ಲೇಖ [2] ದಿನಾಂಕ: 21-01-2008ರ ಈ ಕಛೇರಿಯ ಕಾರಣ ಕೇಳಿ ನೋಟೀಸ್ ಪತ್ರದಲ್ಲಿ ಕರ್ತವ್ಯಕ್ಕೆ ವಾಪಾಸು ಬರಲು ಸೂಚನೆಯನ್ನು ನೀಡಲಾಗಿತ್ತು. ಇದರಂತೆ ಉಲ್ಲೇಖ [3]ರಲ್ಲಿ ಈ ಪ್ರಾಧಿಕಾರಕ್ಕೆ ಮನವಿ ಸಲ್ಲಿಸಿ ಕರ್ತವ್ಯಕ್ಕೆ ಹಾಜರಾಗಲು ಅನುಮತಿ ನೀಡಲು ಕೋರಿದ ಮೇರೆಗೆ ದಿನಾಂಕ: 15-02-2008ರ ಆದೇಶದಲ್ಲಿ ಇವರ ಅನಧೀಕೃತ ಗೈರುಹಾಜರಿ ಆರೋಪದ ಕುರಿತು ಇಲಾಖಾ ವಿಚಾರಣೆ ಕಾಯ್ದಿರಿಸಿ ಕರ್ತವ್ಯಕ್ಕೆ ಹಾಜರಾಗಲು ಅನುಮತಿಯನ್ನು ನೀಡಿದ ಮೇರೆಗೆ ದಿನಾಂಕ: 18-02-2008 ರಂದು ಕರ್ತವ್ಯದ ಮೇಲೆ ಹಾಜರಾಗಿರುತ್ತಾರೆ.

ನಂತರ ಇವರ ಅನಧೀಕೃತ ಗೈರು ಹಾಜರಿ ಆರೋಪದ ಕುರಿತು ಇಲಾಖಾ ವಿಚಾರಣೆ ನಡೆಸಲು ತೀರ್ಮಾನಿಸಿ, ದೋಷಾರೋಪಣಾ ಪಟ್ಟಿ ಅನುಬಂಧ 1 ರಿಂದ 4 ನ್ನು ತಯಾರಿಸಿ ಕರ್ನಾಟಕ ನಾಗರೀಕ ಸೇವಾ [ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ] ನಿಯಮಗಳು 1957ರ ನಿಯಮ 11[4]ರಡಿ ಉಲ್ಲೇಖ [3]ರ ದಿನಾಂಕ: 08-04-2008 ರ ನೋಟೀಸ್ ಪತ್ರದ ಮೂಲಕ ಜಾರಿಗೊಳಿಸಿ ಆರೋಪದ ಕುರಿತು ಲಿಖಿತ ಹೇಳಿಕೆಯನ್ನು ಸೂಕ್ತ ದಾಖಲೆಗಳೊಂದಿಗೆ ಸಲ್ಲಿಸಲು ಸೂಚನೆ ನೀಡಲಾಗಿತ್ತು. ಆದರೆ ನಿಗಧಿತ ಅವಧಿಯೊಳಗೆ ಲಿಖಿತ ಉತ್ತರವನ್ನು ಸಲ್ಲಿಸದೇ ಇರುವುದರಿಂದ ಉಲ್ಲೇಖ [4] ರ ದಿನಾಂಕ: 21-11-2009ರ ನೆನಪೋಲೆಯಲ್ಲಿ ಹೇಳಿಕೆಯನ್ನು ಸಲ್ಲಿಸಲು ಇನ್ನೊಂದು ಅವಕಾಶವನ್ನು ನೀಡಲಾಗಿತ್ತು ಆದರೂ ಸಹ ಹೇಳಿಕೆಯನ್ನು ಸೂಕ್ತ ದಾಖಲೆಗಳೊಂದಿಗೆ ಸಲ್ಲಿಸಿರುವುದಿಲ್ಲ.

ಈ ಇಲಾಖಾ ವಿಚಾರಣೆ ಪೂರ್ಣಗೊಳ್ಳುವ ಪೂರ್ವದಲ್ಲಿ ಪುನಃ ದಿನಾಂಕ: 22-04-2010 ಹಾಗೂ 27-04-2010 ರಿಂದ ಅನಧೀಕೃತ ಗೈರುಹಾಜರಾಗಿರುವುದಾಗಿ ಉಲ್ಲೇಖ [5] ರ ದಿನಾಂಕ: 23-07-2010ರ ಪತ್ರದಲ್ಲಿ ಉಪ ಪ್ರಾಚಾರ್ಯರು ವರದಿ ಮಾಡಿರುತ್ತಾರೆ.

ಈ ವರದಿಯಂತೆ ಉಲ್ಲೇಖ [6]ರ ದಿನಾಂಕ: 07-08-2010 ರ ಕಾರಣ ಕೇಳಿ ನೋಟೀಸ್ ಜಾರಿಗೊಳಿಸಿ ಕರ್ತವ್ಯಕ್ಕೆ ಹಾಜರಾಗಲು ಸೂಚನೆ ನೀಡಲಾಗಿತ್ತು. ಇದರಂತೆ ಉಲ್ಲೇಖ [7]ರಲ್ಲಿ ಈ ಪ್ರಾಧಿಕಾರಕ್ಕೆ ಮನವಿ ಸಲ್ಲಿಸಿ ಕರ್ತವ್ಯಕ್ಕೆ ಹಾಜರಾಗಲು ಅನುಮತಿಯನ್ನು ನೀಡಲು ಕೋರಿದ ಮೇರೆಗೆ ಉಲ್ಲೇಖ [8]ರ ದಿನಾಂಕ: 01-09-2010ರ ಈ ಪ್ರಾಧಿಕಾರದ ಆದೇಶದಲ್ಲಿ ಇವರ ಗೈರು ಹಾಜರಿ ಅವಧಿಯ ಆರೋಪದ ಕುರಿತು ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ ಕರ್ತವ್ಯಕ್ಕೆ ಹಾಜರಾಗಲು ಅನುಮತಿಯನ್ನು ನೀಡಲಾಗಿದೆ. ಇದರಂತೆ ದಿನಾಂಕ: 02-09-2010 ರಂದು ಶಾಲಾ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ನೌಕರರು ಅವರ ಸೇವಾ ಅವಧಿಯಲ್ಲಿ ಪದೇ ಪದೇ ಕರ್ತವ್ಯಕ್ಕೆ ಅನಧೀಕೃತವಾಗಿ ಗೈರುಹಾಜರಾಗುತ್ತಿದ್ದು, ಒಂದು ಪ್ರಕರಣದ ವಿಚಾರಣೆ ಬಾಕಿ ಇರುವಾಗ ಪುನಃ ಅನಧೀಕೃತ ಗೈರುಹಾಜರಾಗುತ್ತಿದ್ದು, ದೋಷಾರೋಪಣಾ ಪಟಿಯನ್ನು ತಯಾರಿಸಲು ಅಡಚಣೆಯಾದ ಪ್ರಯುಕ್ತ ಉಲ್ಲೇಖ [9]ರ ಪತ್ರದಲ್ಲಿ ಸದರಿ ನೌಕರರು ಎಷ್ಟು ಬಾರಿ ಅನಧೀಕೃತ ಗೈರುಹಾಜರಿ ಯಾಗಿರುತ್ತಾರೆ ಎಂಬ ಕುರಿತು ನಿಖರವದ ವರದಿಯನ್ನು ನೀಡಲು ಉಪ ಪ್ರಾಚಾರ್ಯರಿಗೆ ಸೂಚನೆ ನೀಡಲಾಗಿತ್ತು.

ಉಲ್ಲೇಖ [10]ರ ದಿನಾಂಕ: 27-01-2011ರ ಪತ್ರದಲ್ಲಿ ಸದರಿ ನೌಕರರು ದಿನಾಂಕ: 01-10-2005 ರಿಂದ 27-04-2006 ರವರೆಗೆ 02-07-2007 ರಿಂದ 17-02-2008ರ ವರೆಗೆ 20-05-2008 ರಿಂದ 14-11-2008 ರವರೆಗೆ, 22-04-2010 ರಿಂದ 01-09-2010 ರವೆರೆಗೆ ಹಾಗೂ ದಿನಾಂಕ: 05-10-2010 ರಿಂದ ವರದಿ ಮಾಡುವ ದಿನಾಂಕದವರೆಗೆ ಹಾಗೂ ಈಗಲೂ ಅನಧೀಕೃತ ಗೈರುಹಾಜರಿ ಮುಂದುವರೆದಿರುವುದಾಗಿ ವರದಿ ಮಾಡಿರುತ್ತಾರೆ.

ಸದರಿ ನೌಕರರ ಮೇಲಿನ ವಿವಿಧ ದಿನಾಂಕಗಳಲ್ಲಿನ ಅನಧೀಕೃತ ಗೈರುಹಾಜರಿಗೆ ಸಂಬಂಧಿಸಿದಂತೆ ಪರೀಷ್ಕೃತ ದೋಷಾರೋಪಣಾ ಪಟ್ಟಿ ಅನುಬಂಧ 1 ರಿಂದ 4ನ್ನು ತಯಾರಿಸಿ ಕರ್ನಾಟಕ ನಾಗರೀಕ ಸೇವಾ [ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ] ನಿಯಮಗಳು 1957ರ ನಿಯಮ 11[4]ರಡಿ ಉಲ್ಲೇಖ [11] ರ ನೋಟೀಸ್ ಮೂಲಕ ದೋಷಾರೋಪಣಾ ಪಟ್ಟಿಯನ್ನು ಉಪ ಪ್ರಾಚಾರ್ಯರ ಮೂಲಕ ಜಾರಿಗೊಳಿಸಿ ಆರೋಪಗಳ ಕುರಿತು ಲಿಖಿತ ಹೇಳಿಕೆಯನ್ನು ಸೂಕ್ತ ದಾಖಲೆಗಳೊಂದಿಗೆ ಸಲ್ಲಿಸಲು ನಿರ್ದೇಶನ ನೀಡಲಾಗಿತ್ತು.

ಉಲ್ಲೇಖ [12] ರ ದಿನಾಂಕ: 10-06-2011 ರ ಉಪ ಪ್ರಾಚಾರ್ಯರ ಪತ್ರದಲ್ಲಿ ಸದರಿ ನೌಕರರು ಪ್ರಸ್ತುತ ಅನಧೀಕೃತ ಗೈರುಹಾಜರಿಯಲ್ಲಿರುವುದರಿಂದ ಅವರ ಸೇವಾ ಪುಸ್ತಕದಲ್ಲಿನ ಸ್ವಂತ ವಿಳಾಸಕ್ಕೆ ದೋಷಾರೋಪಣಾ ಪಟ್ಟಿಯನ್ನು ಕಳುಹಿಸಿಕೊಡಲಾಗಿ, ವಿಳಾಸದಾರರು ಇರುವುದಿಲ್ಲ ಎಂದು ನೊಂದಾಣಿ ಅಂಚೆ ಲಕೋಟೆ ವಾಪಾಸು ಬಂದಿರುವುದಾಗಿ ವರದಿ ನೀಡಿರುತ್ತಾರೆ.

ಉಲ್ಲೇಖ [13]ರ ದಿನಾಂಕ: 15-09-2011ರ ಈ ಪ್ರಾಧಿಕಾರದ ಜ್ಞಾಪನಾದಲ್ಲಿ ಕರ್ತವ್ಯಕ್ಕೆ ಹಾಜರಾಗಲು ಸೂಚನೆಯನ್ನು ನೀಡಲಾಗಿತ್ತು. ಇದರಂತೆ ದಿನಾಂಕ: 28-09-2011 ರಂದು ಕರ್ತವ್ಯದ ಮೇಲೆ ಹಾಜರಾಗಿರುತ್ತಾರೆ. ಆದರೆ ಈ ಪ್ರಾಧಿಕಾರದಿಂದ ನೀಡಲಾದ ದೋಷಾರೋಪಣೆಗೆ ಯಾವುದೇ ಲಿಖಿತ ಉತ್ತರವನ್ನು ನೀಡಿರುವುದಿಲ್ಲ ಆದ್ದರಿಂದ ಸದರಿ ನೌಕರರ ಮೇಲಿನ ದೋಷಾರೋಪಣಾ ಪಟ್ಟಿಯಲ್ಲಿನ ಆರೋಪದ ಕುರಿತು ವಿಚಾರಣಾ ಪ್ರಾದಿಕಾರ ರಚಿಸಿ ಅವರ ಮೇಲಿನ ಆರೋಪದ ಕುರಿತು ವಿಚಾರಣಾ ವರದಿ ಪಡೆದು ಮುಂದಿನ ಕ್ರಮಕ್ಕೈಗೊಳ್ಳಲು ನಿರ್ಧರಿಸಿ ಉಲ್ಲೇಖ [14]ರ ದಿನಾಂಕ: 22-09-2011 ರ ಆದೇಶದಲ್ಲಿ ವಿಚಾರಣಾ ಪ್ರಾಧಿಕಾರ ರಚಿಸಿ ವಿಚಾರಣೆ ನಡೆಸಿ ವರದಿಯನ್ನು ಸಲ್ಲಿಸಲು ನಿರ್ದೇಶನ ನೀಡಲಾಗಿತ್ತು.

ಉಲ್ಲೇಖ [15]ರಲ್ಲಿ ವಿಚಾರಣಾಧಿಕಾರಿಗಳು ವರದಿಯನ್ನು ಸಲ್ಲಿಸಿದ್ದು, ವರದಿಯನ್ನು ಪರಿಶೀಲಿಸಲಾಗಿ ವಿಚಾರಣಾ ಸಮಯದಲ್ಲಿ ಆರೋಪಿತ ನೌಕರರು, ಆರೋಪವನ್ನು ಒಪ್ಪಿಕೊಂಡಿರುವುದಾಗಿ ವರದಿ ಮಾಡಿರುತ್ತಾರೆ. ಇವರ ಅನಧೀಕೃತ ಗೈರುಹಾಜರಿಯು ಧೀರ್ಘಾವಧಿಯಿಂದ

ಕೂಡಿದ್ದು, ಆರೋಪವನ್ನು ವಿಚಾರಣಾ ಸಮಯದಲ್ಲಿ ಉಪ ಪ್ರಾಚಾರ್ಯರ ಸಮ್ಮುಖದಲ್ಲಿ ಒಪ್ಪಿಕೊಂಡಿರುವುದರಿಂದ ವಿಚಾರಣಾ ವರದಿಯನ್ನು ಉಲ್ಲೇಖ [16]ರ ದಿನಾಂಕ: 19-11-2011 ರ ಎರಡನೇ ನೋಟೀಸ್ ಮೂಲಕ ಜಾರಿಗೊಳಿಸಿ ವರದಿಯ ಮೇಲೆ ಹೇಳುವುದು ಏನಾದರೂ ಇದ್ದಲ್ಲಿ ಸೂಕ್ತ ದಾಖಲೆಗಳೊಂದಿಗೆ ಈ ಪ್ರಾಧಿಕಾರಕ್ಕೆ ಸಲ್ಲಿಸಲು ನಿರ್ದೇಶನ ನೀಡಲಾಗಿದೆ.

ಉಲ್ಲೇಖ [17]ರ ದಿನಾಂಕ: 29-11-2011 ರಂದು ರಕ್ಷಣಾ ಹೇಳಿಕೆಯನ್ನು ಸಲ್ಲಿಸಿರುತ್ತಾರೆ, ಪರಿಶೀಲಿಸಲಾಗಿ ಇವರ ಅನಧೀಕೃತ ಗೈರುಹಾಜರಿಗೆ ಸಂಬಂಧಿಸಿದಂತೆ ಆರೋಪವನ್ನು ಅಲ್ಲಗಳೆಯಲು ಯಾವುದೇ ದೃಢೀಕೃತ ದಾಖಲೆಗಳನ್ನು ಸಲ್ಲಿಸಿರುವುದಿಲ್ಲ ಹಾಗೂ ವಿಚಾರಣಾ ಸಂದರ್ಭದಲ್ಲಿ ವಯಕ್ತಿಕ ಕಾರಣಗಳಿಂದ ಗೈರುಹಾಜರಾಗಿರುತ್ತೇನೆ ಎಂದು ಮತ್ತು ಎರಡನೇ ನೋಟೀಸಿಗೆ ಸಲ್ಲಿಸಿದ ಹೇಳಿಕೆಯಲ್ಲಿ ಹೆಂಡತಿಯ ಅನಾರೋಗ್ಯದ ಕಾರಣದಿಂದ ಗೈರುಹಾಜರಾಗಿರುವುದಾಗಿ ಹೇಳಿಕೆ ನೀಡಿದ್ದು, ಈ ಹೇಳಿಕೆಗೆ ಯಾವುದೇ ದಾಖಲೆಗಳನ್ನು ಸಲ್ಲಿಸಿರುವುದಿಲ್ಲ. ದಿನಾಂಕ: 20-05-2008 ರಿಂದ 14-11-2008, 179 ದಿನಗಳು, 27-04-2010 ರಿಂದ 01-09-2010 128 ದಿನಗಳು ಹಾಗೂ 05-10-2010 ರಿಂದ 26-09-2011ರವರೆಗೆ 357 ದಿನಗಳು ದೀರ್ಘಕಾಲದಿಂದ ಅನಧೀಕೃತ ಗೈರುಹಾಜರಿಯಾಗಿರುವುದರಿಂದ ಉಲ್ಲೇಖ [18]ರ ಸರ್ಕಾರದ ಆದೇಸದಂತೆ ಪರಿಶೀಲಿಸಿ ಈ ಕೆಳಕಂಡ ಆದೇಶ,

## ಆದೇಶ

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ.ಬಿ.ಎ.ರಾಜಶೇಖರ, ಶಿಸ್ತು ಪ್ರಾಧಿಕಾರಿ ಹಾಗೂ ಉಪನಿರ್ದೇಶಕ [ಆಡಳಿತ] ಆದ ನಾನು ಕರ್ನಾಟಕ ನಾಗರೀಕ ಸೇವಾ [ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ] ನಿಯಮಗಳು 1957ರ ನಿಯಮ 7 ರಲ್ಲಿ ಹಾಗೂ 9 ರಲ್ಲಿನ ['ಗ' ಮತ್ತು 'ಪ' ನಲ್ಲಿನ] ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ.ಆರ್.ಸ್ವಾಮಿ, ದ್ವಿತೀಯ ದರ್ಜೆ ಸಹಾಯಕರು, ಧ.ರಾ.ಮ. ಸರ್ಕಾರಿ ಪದವಿ ಪೂರ್ವ ಕಾಲೇಜು, ಹರಿಹರ, ಹರಿಹರ ತಾಲ್ಲೂಕು ರವರನ್ನು ಕರ್ನಾಟಕ ನಾಗರೀಕ ಸೇವಾ ನಿಯಮಗಳು 1957ರ ನಿಯಮ 108 ರ ರಿತ್ಯಾ ಈ ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಯಿಂದ ವಜಾಗೊಳಿಸಿ ಆದೇಶಿಸಿದೆ.

ಶ್ರೀ.ಆರ್.ಸ್ವಾಮಿ. ದ್ವಿತೀಯ ದರ್ಜೆ ಸಹಾಯಕರು, ಇವರ ಅನಧೀಕೃತ ಗೈರುಹಾಜರಿ ಅವಧಿ ದಿನಾಂಕ: 20-05-2008 ರಿಂದ 14-11-2008, 179 ದಿನಗಳು, 27-04-2010 ರಿಂದ 01-09-2010 128 ದಿನಗಳು ಹಾಗೂ 05-10-2010 ರಿಂದ 26-09-2011ರವರೆಗೆ 357 ದಿನಗಳ ಅವಧಿಯನ್ನು ಕರ್ತವ್ಯದಲ್ಲಿಲ್ಲದ ಅವಧಿ ಎಂದು ಪರಿಗಣಿಸಿದೆ.

**ಬಿ.ಎ.ರಾಜಶೇಖರ,**
ಶಿಸ್ತು ಪ್ರಾಧಿಕಾರಿ ಹಾಗೂ ಉಪನಿರ್ದೇಶಕ [ಆಡಳಿತ]
ಸಾರ್ವಜನಿಕ ಶಿಕ್ಷಣ ಇಲಾಖೆ, ದಾವಣಗೆರೆ

**ಪಿ.ಆರ್. 718**

## ವಾಣಿಜ್ಯ ತೆರಿಗೆಗಳ ಆಯುಕ್ತರು (ಕರ್ನಾಟಕ), ಬೆಂಗಳೂರು, ಇವರ ನಡಾವಳಿಗಳು

**ವಿಷಯ:** ವಾಣಿಜ್ಯ ತೆರಿಗೆ ಇಲಾಖೆಯ ಜಂಟಿ ಆಯುಕ್ತರು, ಮೌಲ್ಯವರ್ಧಿತ ತೆರಿಗೆ ವಿಭಾಗ–6, ಬೆಂಗಳೂರು, ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಕಛೇರಿಗಳ ಪುನರ್ ವಿಂಗಡಣೆ, ಸ್ಥಳಾಂತರ ಮತ್ತು ಪುನರ್ ವ್ಯವಸ್ಥೆಗೊಳಿಸುವ ಬಗ್ಗೆ.

**ಉಲ್ಲೇಖ:** (1) ಸರ್ಕಾರದ ಆದೇಶ ಸಂಖ್ಯೆ: ಆಇ 121 ವಾತೆಸಿ 94, ದಿನಾಂಕ: 04–02–1995.
(2) ಸರ್ಕಾರದ ಆದೇಶ ಸಂಖ್ಯೆ: ಆಇ 36 ವಾತೆಇ 2005, ದಿನಾಂಕ: 31–03–2005.
(3) ಆಯುಕ್ತರ ಆದೇಶ ಸಂಖ್ಯೆ: ಸಿಬ್ಬಂದಿ.3ಸಿ.ಸಿಆರ್.157/06–07, ದಿನಾಂಕ: 24–03–2007.
(4) ಆಯುಕ್ತರ ಆದೇಶ ಸಂಖ್ಯೆ: ಸಿಬ್ಬಂದಿ.3ಸಿ.ಸಿಆರ್.157/06–07, ದಿನಾಂಕ: 30–03–2007.
(5) ಆಯುಕ್ತರ ಅಧಿಸೂಚನೆ ಸಂಖ್ಯೆ: ವ್ಯಾಟ್.ಸಿಆರ್–1/2007–08, ದಿನಾಂಕ 22–09–2007.
(6) ಜಂಟಿ ಆಯುಕ್ತರು, ಮೌ.ವ.ತೆ. ವಿಭಾಗ–6, ಇವರ ಪತ್ರ ಸಂಖ್ಯೆ: ವಾತೆಜಂಆ(ಆ) ಮೌ.ವ.ತೆ.ವಿ–6/ಕ್ಷೇ.ವ್ಯಾ/ಇತರೆ.ಸಿಆರ್.29/2010, ದಿನಾಂಕ 22–7–2011 ಮತ್ತು 18–11–2011.

**ಪ್ರಸ್ತಾವನೆ:**

1. ವಾಣಿಜ್ಯ ತೆರಿಗೆ ಇಲಾಖೆಯು ಉಲ್ಲೇಖ (1)ರ ಆದೇಶ ಮುಖೇನ ಮೌಲ್ಯವರ್ಧಿತ ತೆರಿಗೆಯನ್ನು ಜಾರಿಗೆ ತಂದಿದ್ದು, ಬೆಂಗಳೂರು ನಗರದಲ್ಲಿ 16 ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಕಛೇರಿಗಳನ್ನು ನಿಯೋಜಿಸಲಾಗಿತ್ತು. ಉಲ್ಲೇಖ (2), (3), (4) ಮತ್ತು (5)ರ ಆದೇಶ ಮುಖೇನ ಬೆಂಗಳೂರು ನಗರದಾದ್ಯಂತ ಭೌಗೋಳಿಕ ವ್ಯಾಪ್ತಿಯಲ್ಲಿ ಅಂಚೆ ಪಿನ್‌ಕೋಡ್ ಆಧಾರದ ಮೇಲೆ ಹೊಸದಾಗಿ 17 ಕಛೇರಿಗಳು ಸೇರಿದಂತೆ ಒಟ್ಟು 33 ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಕಛೇರಿಗಳನ್ನು ನಿಯೋಜಿಸಿ, ವ್ಯಾಪಾರಸ್ಥರು ಮೌಲ್ಯವರ್ಧಿತ ತೆರಿಗೆ ಕಾಯ್ದೆ ಅಡಿ ಪಾವತಿಸುವ ತೆರಿಗೆಯನ್ನು ಸಂಗ್ರಹಿಸಲು ಆದೇಶಿಸಲಾಗಿತ್ತು. ಈ ರೀತಿ ವಿಭಜಿಸುವಾಗ ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಕಚೇರಿ–050 ಕಚೇರಿಯನ್ನು ವಿಭಜಿಸಿರಲಿಲ್ಲ. ಉಲ್ಲೇಖ (6)ರ ಪತ್ರದಲ್ಲಿ ಜಂಟಿ ಆಯುಕ್ತರು, ಈಗ ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಕಚೇರಿ–050 ರಲ್ಲಿ 8108 ನೋಂದಾಯಿತ ವರ್ತಕರಿದ್ದು, ಎಲ್ಲಾ ವರ್ತಕರು

ಸಮರ್ಪಕವಾಗಿ ನಮೂನೆ ನೀಡುತ್ತಿರುವರೇ, ತೆರಿಗೆ ಪಾವತಿಸುತ್ತಿರುವರೇ ಹಾಗೂ ನೀಡಿದ ಚೆಕ್ಕುಗಳು ಹಣ ಪಾವತಿಯಾಗದೆ ಹಿಂತಿರುಗಿಸಿದ ಪ್ರಕರಣಗಳಲ್ಲಿ ಸೂಕ್ತ ಕ್ರಮಗಳನ್ನು ಕೈಗೊಳ್ಳಲಾಗಿದೆಯೇ ಎಂಬುದರ ಬಗ್ಗೆ ನಿಗಾವಹಿಸಬೇಕಾಗುತ್ತದೆ. ಆದರೆ ಈ ಕಾರ್ಯವು ಸಮರ್ಪಕವಾಗಿ ನಿರ್ವಹಿಸಲು ಸಾಧ್ಯವಾಗುತ್ತಿಲ್ಲ ಹಾಗೂ ಹಾಲಿ ಇರುವ ಅಧಿಕಾರಿ ಮತ್ತು ನೌಕರರಿಂದ ಕಾರ್ಯನಿರ್ವಹಿಸಲು ಕಷ್ಟವಾದ್ದರಿಂದ ರಾಜ್ಯದ ರಾಜಸ್ವ ಸಂಗ್ರಹಣೆಯ ಹಿತದೃಷ್ಟಿಯಿಂದ ಹಾಗೂ ಕಾಯ್ದೆಯನ್ನು ಸಮರ್ಪಕವಾಗಿ ಜಾರಿಗೊಳಿಸುವ ಉದ್ದೇಶದಿಂದ ಪ್ರಸ್ತುತ ಇರುವ ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಕಛೇರಿ–050 ಅನ್ನು ಮರುವಿಂಗಡಿಸುವುದು ಅನಿವಾರ್ಯವಾಗಿದೆ ಎಂದು ತಿಳಿಸಿರುತ್ತಾರೆ.

2. ಈ ಹಿನ್ನೆಲೆಯಲ್ಲಿ ರಾಜ್ಯದ ರಾಜಸ್ವ ಸಂಗ್ರಹಣೆಯ ಬೆಳವಣಿಗೆಯಲ್ಲಿ ತೀವ್ರವಾದ ಏರಿಕೆಯನ್ನು ತರಬಹುದೆಂಬ ಉದ್ದೇಶದಿಂದ ಹಾಗೂ ಪ್ರತಿ ಮೌಲ್ಯವರ್ಧಿತ ತೆರಿಗೆ ಕಛೇರಿಯಲ್ಲಿ ಕಡಿಮೆ ನೊಂದಾಯಿತ ವರ್ತಕರಿದ್ದಲ್ಲಿ ಅವರು ಸಲ್ಲಿಸುವ ದಾಖಲೆಗಳನ್ನು ಪರಿಶೀಲಿಸಿ, ಕಂಡುಬಂದ ನ್ಯೂನತೆಗಳನ್ನು ಆಧರಿಸಿ ತಕ್ಷಣ ಕ್ರಮ ಕೈಗೊಳ್ಳಬಹುದಾಗಿದೆ. ಇದರಿಂದಾಗಿ ತೆರಿಗೆ ಸಂಗ್ರಹಣೆಯಲ್ಲಿ ಉಪಯುಕ್ತತೆಯಾಗುತ್ತದೆ ಮತ್ತು ವರ್ತಕರು ನೀಡುವ ನಮೂನೆಗಳನ್ನು, ಪಾವತಿಸುವ ತೆರಿಗೆ, ಹೂಡುವಳಿ ತೆರಿಗೆಯ ಪೂರ್ಣ ವಿವರಗಳನ್ನು ಪರಿಶೀಲಿಸಬಹುದಾದ್ದರಿಂದ ತೆರಿಗೆ ವಂಚನೆಯನ್ನು ತಡೆಹಿಡಿಯಬಹುದಾಗಿದೆ. ಇದು ರಾಜ್ಯದ ರಾಜಸ್ವ ಸಂಗ್ರಹಣೆಯನ್ನು ಹೆಚ್ಚಿಸುವಲ್ಲಿ ಬಹಳ ಉಪಯುಕ್ತತೆಯಾಗುತ್ತದೆ. ಆದ್ದರಿಂದ ಬೆಂಗಳೂರು ನಗರದ ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು (ಆಡಳಿತ), ಮೌಲ್ಯವರ್ಧಿತ ತೆರಿಗೆ ವಿಭಾಗ–6, ಬೆಂಗಳೂರು, ಇವರ ವ್ಯಾಪ್ತಿಯಲ್ಲಿ ಬರುವ ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಕಛೇರಿ–050 ಈ ಕಛೇರಿಯನ್ನು ವಿಭಜಿಸಿ ಭೌಗೋಳಿಕ ವ್ಯಾಪ್ತಿಯಲ್ಲಿ ಅಂಚೆ ಪಿನ್‌ಕೋಡ್ ಆಧಾರದ ಮೇಲೆ ಪುನರ್ ವಿಂಗಡಣೆಗೊಳಿಸಲು ಉದ್ದೇಶಿಸಿದೆ.

| ಕ್ರ.ಸಂ. | ಪ್ರಸ್ತುತ ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಕಛೇರಿಗಳು | ಮರುವಿಂಗಡಿಸಿದ ಮೌಲ್ಯವರ್ಧಿತ ತೆರಿಗೆ ಕಛೇರಿಗಳು |
|---|---|---|
| 1 | ಎಲ್.ವಿ.ಓ–050, ಮಹಾಲಕ್ಷ್ಮಿ ಲೇಔಟ್, ಬೆಂಗಳೂರು. | 1) ಎಲ್.ವಿ.ಓ–050, ಬೆಂಗಳೂರು.<br>2) ಎಲ್.ವಿ.ಓ–050 (ಅಪರ), ಬೆಂಗಳೂರು. |

3. ಈ ರೀತಿಯಾಗಿ ಮರುವಿಂಗಡಣೆಗೊಳಿಸಿದ ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಕಛೇರಿಗಳಿಗೆ ಕೆಳಕಂಡಂತೆ ಭೌಗೋಳಿಕ ಆಧಾರವನ್ನಾಗಿ ಅಂಚೆ ಪಿನ್‌ಕೋಡ್ ಸಂಖ್ಯೆಗಳನ್ನು ನೀಡಲು ನಿರ್ಧರಿಸಲಾಗಿದೆ. ಇವುಗಳ ವಿವರಗಳು ಕೆಳಕಂಡಂತಿವೆ.

| ಕ್ರ. ಸಂ. | ಕಛೇರಿಗಳು | ಅಂಚೆ ಪಿನ್‌ಕೋಡ್ ಸಂಖ್ಯೆ | ವರ್ತಕರ ಸಂಖ್ಯೆ | | ಕಛೇರಿಯ ಕಾರ್ಯವ್ಯಾಪ್ತಿ |
|---|---|---|---|---|---|
| | | | ಪಿನ್‌ಕೋಡ್ ವಾರು | ಒಟ್ಟು | |
| 1 | ಎಲ್.ವಿ.ಓ–050 | 560022<br>560054 | 3786<br>2118 | 5904 | ಯಶವಂತಪುರ<br>ಮತ್ತಿಕೆರೆ |
| 2 | ಎಲ್.ವಿ.ಓ–050 (ಅಪರ) | 560086<br>560096 | 2110<br>1094 | 3204 | ಮಹಾಲಕ್ಷ್ಮಿಪುರಂ<br>ನಂದಿನಿ ಲೇಔಟ್ |

4. ಪುನರ್‌ವ್ಯವಸ್ಥೆಗೊಳಿಸಿದ ಕಛೇರಿಗಳ ಕಾರ್ಯನಿರ್ವಹಣೆಗೆ ಅಗತ್ಯವಾದ ಅಧಿಕಾರಿ ಹಾಗೂ ಸಿಬ್ಬಂದಿಗಳ ಹುದ್ದೆಯನ್ನು ಸ್ಥಳಾಂತರಿಸಲು ಉದ್ದೇಶಿಸಲಾಗಿದ್ದು, ಪ್ರತಿ ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಕಛೇರಿಗಳಿಗೆ ಕೆಳಕಂಡಂತೆ ಹುದ್ದೆಗಳನ್ನು ಮಂಜೂರು ಮಾಡಲು ಉದ್ದೇಶಿಸಲಾಗಿದೆ.

| ಕ್ರ. ಸಂ. | ಕಛೇರಿಗಳು | ವಾ.ತೆ.ಸ.ಆ | ವಾ.ತೆ.ಅ | ವಾ.ತೆ.ಪ | ಪ್ರ.ದ.ಸ. | ದ್ವಿ.ದ.ಸ. | ಬೆ. ಗಾರರು | ಕ.ವ | 'ಡಿ' ಗ್ರೂಪ್ |
|---|---|---|---|---|---|---|---|---|---|
| **1** | **2** | **3** | **4** | **5** | **6** | **7** | **8** | **9** | **10** |
| 1 | ಎಲ್.ವಿ.ಓ–050 | 1 | 1 | 1 | 3 | 5 | 1 | 1 | 2 |
| 2 | ಎಲ್.ವಿ.ಓ–050 (ಅಪರ) | 1 | 1 | 1 | 3 | 5 | 1 | 1 | 2 |

5. ಮೇಲ್ಕಂಡ ಅಪರ ಕಚೇರಿಗೆ ಬೇಕಾದ ಅಧಿಕಾರಿ ಹಾಗೂ ಸಿಬ್ಬಂದಿಗಳ ಹುದ್ದೆಯ ಸ್ಥಳಾಂತರದ ವಿವರವನ್ನು ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು (ಆಡಳಿತ), ಮೌಲ್ಯವರ್ಧಿತ ತೆರಿಗೆ ವಿಭಾಗ–6, ಬೆಂಗಳೂರು, ಇವರು ದಿನಾಂಕ 18–11–2011 ರ ಪತ್ರದಲ್ಲಿ ವಿವರವಾಗಿ ನೀಡಿರುತ್ತಾರೆ. ಅದನ್ನು ಆಧರಿಸಿ, ಮೇಲ್ಕಂಡ ತ:ಖ್ತೆಯ ಅಂಕಣ (3) ರಿಂದ (10)ರವರೆಗೆ ಎರಡು ಕಛೇರಿಗಳಿಗೆ ಮಂಜೂರು ಮಾಡಿದ ಹುದ್ದೆಗಳಿಗೆ ಪೂರಕ ಸಿಬ್ಬಂದಿಯೊಂದಿಗೆ ಹುದ್ದೆಗಳನ್ನು ಸ್ಥಳಾಂತರಿಸುವ ಆದೇಶವನ್ನು ಪ್ರತ್ಯೇಕವಾಗಿ ನೀಡಲಾಗುತ್ತದೆ.

6. ಪುನರ್‌ವ್ಯವಸ್ಥೆಗೊಳಿಸಲು ಉದ್ದೇಶಿಸಿದ ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಕಛೇರಿಗಳ ಅಧಿಕಾರಿಗಳು ಮೌಲ್ಯವರ್ಧಿತ ತೆರಿಗೆ, ಕೇಂದ್ರ ಮಾರಾಟ ತೆರಿಗೆ ಮತ್ತು ಪ್ರವೇಶ ತೆರಿಗೆ ಕಾಯ್ದೆ ಅಡಿ ಬರುವ ಎಲ್ಲಾ ತರಹದ ಕಾರ್ಯವನ್ನು ನಿರ್ವಹಿಸುವ ಅಧಿಕಾರ ವ್ಯಾಪ್ತಿಯನ್ನು ಹೊಂದಿರುತ್ತಾರೆ. ಆಡಳಿತಾತ್ಮಕವಾಗಿ ಪುನರ್‌ವ್ಯವಸ್ಥೆಗೊಳಿಸಲಾದ ಕಛೇರಿಗಳ ವೇತನ ಬಟವಾಡೆ ಅಧಿಕಾರವನ್ನು ಸಂಬಂಧಿತ ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಕಛೇರಿಗಳ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರೇ ವೇತನ ಬಟವಾಡೆ ಮತ್ತಿತರ ಭತ್ಯೆಗಳನ್ನು ಖಜಾನೆಯಿಂದ ಪಡೆದು ಹಂಚುವ ಅಧಿಕಾರವನ್ನು ಹೊಂದಿರುತ್ತಾರೆ.

7. ಉಲ್ಲೇಖ (1)ರ ಸರ್ಕಾರದ ಆದೇಶದಲ್ಲಿ ಪುನರ್ ವಿಂಗಡಣೆ, ಪುನರ್ ವ್ಯವಸ್ಥೆ, ಸ್ಥಳಾಂತರ ಮಾಡುವ ಅಧಿಕಾರವನ್ನು ಸರ್ಕಾರ ಆಯುಕ್ತರಿಗೆ ಪ್ರತ್ಯಾಯೋಜಿಸಿರುವುದರಿಂದ, ಅದನ್ನು ಚಲಾಯಿಸಿ ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು(ಆಡಳಿತ), ಮೌಲ್ಯವರ್ಧಿತ ತೆರಿಗೆ ವಿಭಾಗ-6 ರ ಆಡಳಿತ ವ್ಯಾಪ್ತಿಯಲ್ಲಿ ಬರುವ ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಕಛೇರಿ-050ನ್ನು ವಿಭಜಿಸಿ ಎರಡು ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಕಛೇರಿಗಳನ್ನಾಗಿ ಪುನರ್ ವ್ಯವಸ್ಥೆಗೊಳಿಸಲು ಉದ್ದೇಶಿಸಲಾಗಿದೆ.

ಅದಕ್ಕಾಗಿ ಈ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಸಿಬ್ಬಂದಿ-3ಸಿ/ಸಿಆರ್-32/11-12, ದಿನಾಂಕ: 16-04-2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಗನುಗುಣವಾಗಿ ಉಲ್ಲೇಖ (1)ರ ಸರ್ಕಾರದ ಆದೇಶದಲ್ಲಿ ಆಯುಕ್ತರಿಗೆ ನೀಡಿದ ಅಧಿಕಾರವನ್ನು ಉಪಯೋಗಿಸಿಕೊಂಡು, ನೊಂದಾಯಿತ ವರ್ತಕರು ಪಾವತಿಸುವ ತೆರಿಗೆ, ಹೂಡುವಳಿ ತೆರಿಗೆ ಮತ್ತು ಸಲ್ಲಿಸುವ ಮಾಸಿಕ ನಮೂನೆಗಳನ್ನು ಸಮಗ್ರವಾಗಿ ಪರಿಶೀಲಿಸಿ, ತೆರಿಗೆ ವಂಚನೆಯನ್ನು ತಡೆಗಟ್ಟಿ ರಾಜ್ಯದ ರಾಜಸ್ವ ಸಂಗ್ರಹಣೆಯನ್ನು ಹೆಚ್ಚಿಸುವ ಹಿತದೃಷ್ಟಿಯಿಂದ ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು (ಆಡಳಿತ), ಮೌಲ್ಯವರ್ಧಿತ ತೆರಿಗೆ ವಿಭಾಗ-6, ಬೆಂಗಳೂರು, ಇವರ ಆಡಳಿತ ವ್ಯಾಪ್ತಿಯಲ್ಲಿರುವ ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಕಚೇರಿಯಾದ ಎಲ್.ವಿ.ಓ-050 ಅನ್ನು ಮರುವಿಂಗಡಣೆ ಮಾಡಿ ಕೆಳಕಂಡ ತ:ಖ್ತೆಯ ಅಂಕಣ 3ರಲ್ಲಿ ನಮೂದಿಸಿದಂತೆ ಎರಡು ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಕಛೇರಿಗಳನ್ನಾಗಿ ಪುನರ್ ವ್ಯವಸ್ಥೆಗೊಳಿಸಿ ಆದೇಶಿಸಿದೆ.

| ಕ್ರ.ಸಂ. | ಪ್ರಸ್ತುತ ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಕಛೇರಿಗಳು | ಮರುವಿಂಗಡಿಸಿದ ಮೌಲ್ಯವರ್ಧಿತ ತೆರಿಗೆ ಕಛೇರಿಗಳು |
|---|---|---|
| 1 | ಎಲ್.ವಿ.ಓ-050, ಮಹಾಲಕ್ಷ್ಮಿ ಲೇಔಟ್, ಬೆಂಗಳೂರು. | 1) ಎಲ್.ವಿ.ಓ-050, ಬೆಂಗಳೂರು.<br>2) ಎಲ್.ವಿ.ಓ-050 (ಅಪರ), ಬೆಂಗಳೂರು. |

ಮೇಲ್ಕಂಡಂತೆ ಪುನರ್ ವಿಂಗಡಣೆಗೊಳಿಸಲಾದ ಎರಡು ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಕಛೇರಿಗಳ ಕಾರ್ಯನಿರ್ವಹಣೆಗೆ ಕೆಳಕಂಡಂತೆ ಅಂಚೆ ಪಿನ್‌ಕೋಡ್‌ಗಳನ್ನು ಆಧರಿಸಿ, ಭೌಗೋಳಿಕ ವ್ಯಾಪ್ತಿಯನ್ನು ನಿಗದಿಪಡಿಸಿದೆ.

| ಕ್ರ. ಸಂ. | ಕಛೇರಿಗಳು | ಅಂಚೆ ಪಿನ್‌ಕೋಡ್ ಸಂಖ್ಯೆ | ವರ್ತಕರ ಸಂಖ್ಯೆ | | ಕಛೇರಿಯ ಕಾರ್ಯವ್ಯಾಪ್ತಿ |
|---|---|---|---|---|---|
| | | | ಪಿನ್‌ಕೋಡ್ ವಾರು | ಒಟ್ಟು | |
| 1 | ಎಲ್.ವಿ.ಓ-050 | 560022<br>560054 | 3786<br>2118 | 5904 | ಯಶವಂತಪುರ<br>ಮತ್ತಿಕೆರೆ |
| 2 | ಎಲ್.ವಿ.ಓ-050 (ಅಪರ) | 560086<br>560096 | 2110<br>1094 | 3204 | ಮಹಾಲಕ್ಷ್ಮಿಪುರಂ<br>ನಂದಿನಿ ಲೇಔಟ್ |

ಪುನರ್ ವ್ಯವಸ್ಥೆಗೊಳಿಸಿದ ಎರಡು ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಕಛೇರಿಗಳ ಕಾರ್ಯನಿರ್ವಹಣೆಗೆ ಅಗತ್ಯವಾದ ಅಧಿಕಾರಿ ಹಾಗೂ ಸಿಬ್ಬಂದಿಗಳ ಹುದ್ದೆಯನ್ನು ಕೆಳಕಂಡಂತೆ ಮಂಜೂರು ಮಾಡಿ ಆದೇಶಿಸಿದೆ.

| ಕ್ರ. ಸಂ. | ಕಛೇರಿಗಳು | ವಾ.ತೆ.ಸ.ಆ | ವಾ.ತೆ.ಅ | ವಾ.ತೆ.ಪ | ಪ್ರ.ದ.ಸ. | ದ್ವಿ.ದ.ಸ. | ಬೆ. ಗಾರರು | ಕ.ವ | 'ಡಿ' ಗ್ರೂಪ್ |
|---|---|---|---|---|---|---|---|---|---|
| **1** | **2** | **3** | **4** | **5** | **6** | **7** | **8** | **9** | **10** |
| 1 | ಎಲ್.ವಿ.ಓ-050 | 1 | 1 | 1 | 3 | 5 | 1 | 1 | 2 |
| 2 | ಎಲ್.ವಿ.ಓ-050 (ಅಪರ) | 1 | 1 | 1 | 3 | 5 | 1 | 1 | 2 |

ಮೇಲ್ಕಂಡ ತ:ಖ್ತೆಯ ಅಂಕಣ (3) ರಿಂದ (10)ರವರೆಗೆ ಎರಡು ಕಛೇರಿಗಳಿಗೆ ಮಂಜೂರು ಮಾಡಿದ ಸಿಬ್ಬಂದಿಗಳು ಹಾಗೂ ಪೂರಕ ಹುದ್ದೆಯ ಸ್ಥಳಾಂತರವನ್ನು ಪ್ರತ್ಯೇಕ ಆದೇಶದಲ್ಲಿ ಹೊರಡಿಸಲಾಗುತ್ತದೆ.

ಪುನರ್‌ವ್ಯವಸ್ಥೆಗೊಳಿಸಿದ ಎರಡು ಮೌಲ್ಯವರ್ಧಿತ ತೆರಿಗೆ ಕಛೇರಿಗಳ ಅಧಿಕಾರಿಗಳು ಕರ್ನಾಟಕ ಮೌಲ್ಯವರ್ಧಿತ ತೆರಿಗೆ, ಕೇಂದ್ರ ಮಾರಾಟ ತೆರಿಗೆ ಮತ್ತು ಪ್ರವೇಶ ತೆರಿಗೆ ಕಾಯ್ದೆ ಅಡಿ ಎಲ್ಲಾ ಅಧಿಕಾರ ವ್ಯಾಪ್ತಿಯನ್ನು ಹೊಂದಿರುತ್ತಾರೆ. ಆಡಳಿತಾತ್ಮಕವಾಗಿ ಪುನರ್‌ವ್ಯವಸ್ಥೆಗೊಳಿಸಲಾದ ಕಛೇರಿಗಳ ವೇತನ ಬಟವಾಡೆ ಅಧಿಕಾರವನ್ನು ಸಂಬಂಧಿಸಿದ ಕಚೇರಿಯ ಮುಖ್ಯಾಧಿಕಾರಿಗಳಾದ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರುಗಳಿಗೆ ಅಧಿಕಾರ ನೀಡಲಾಗಿದೆ.

ಈ ವ್ಯವಸ್ಥೆ ದಿನಾಂಕ 01–04–2012 ರಿಂದ ಜಾರಿಗೆ ಬರುತ್ತದೆ.

**ವಾಣಿಜ್ಯ ತೆರಿಗೆಗಳ ಆಯುಕ್ತರು**
(ಕರ್ನಾಟಕ), ಬೆಂಗಳೂರು.

**ಪಿ.ಆರ್. 727**

## ವಾಣಿಜ್ಯ ತೆರಿಗೆಗಳ ಆಯುಕ್ತರು (ಕರ್ನಾಟಕ), ಬೆಂಗಳೂರು, ಇವರ ನಡಾವಳಿಗಳು

**ವಿಷಯ:** ವಾಣಿಜ್ಯ ತೆರಿಗೆ ಇಲಾಖೆಯ ಜಂಟಿ ಆಯುಕ್ತರು, ಮೌಲ್ಯವರ್ಧಿತ ತೆರಿಗೆ ವಿಭಾಗ–1, ಬೆಂಗಳೂರು, ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಕಛೇರಿಗಳ ಪುನರ್ ವಿಂಗಡಣೆ, ಸ್ಥಳಾಂತರ ಮತ್ತು ಪುನರ್ ವ್ಯವಸ್ಥೆಗೊಳಿಸುವ ಬಗ್ಗೆ.

**ಉಲ್ಲೇಖ:** (1) ಸರ್ಕಾರದ ಆದೇಶ ಸಂಖ್ಯೆ: ಆಇ 121 ವಾತೆಸಿ 94, ದಿನಾಂಕ: 04–02–1995.

(2) ಸರ್ಕಾರದ ಆದೇಶ ಸಂಖ್ಯೆ: ಆಇ 36 ವಾತೆಇ 2005, ದಿನಾಂಕ: 31–03–2005.

(3) ಆಯುಕ್ತರ ಆದೇಶ ಸಂಖ್ಯೆ: ಸಿಬ್ಬಂದಿ.3ಸಿ.ಸಿಆರ್.157/06–07, ದಿನಾಂಕ: 24–03–2007.

(4) ಆಯುಕ್ತರ ಆದೇಶ ಸಂಖ್ಯೆ: ಸಿಬ್ಬಂದಿ.3ಸಿ.ಸಿಆರ್.157/06–07, ದಿನಾಂಕ: 30–03–2007.

(5) ಆಯುಕ್ತರ ಅಧಿಸೂಚನೆ ಸಂಖ್ಯೆ: ವ್ಯಾಟ್.ಸಿಆರ್–1/2007–08, ದಿನಾಂಕ 22–09–2007.

(6) ಜಂಟಿ ಆಯುಕ್ತರು, ಮೌ.ವ.ತೆ. ವಿಭಾಗ–1, ಇವರ ಪತ್ರ ಸಂಖ್ಯೆ: ವಾತೆಜಂಆ(ಆ) ಮೌ.ವ.ತೆ.ವಿ–1/319/11–12, ದಿನಾಂಕ 22–7–2011 ಮತ್ತು 19–11–2011.

**ಪ್ರಸ್ತಾವನೆ:**

1. ವಾಣಿಜ್ಯ ತೆರಿಗೆ ಇಲಾಖೆಯು ಉಲ್ಲೇಖ(1)ರ ಆದೇಶ ಮುಖೇನ ಮೌಲ್ಯವರ್ಧಿತ ತೆರಿಗೆಯನ್ನು ಜಾರಿಗೆ ತಂದಿದ್ದು, ಬೆಂಗಳೂರು ನಗರದಲ್ಲಿ 16 ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಕಛೇರಿಗಳನ್ನು ನಿಯೋಜಿಸಲಾಗಿತ್ತು. ಉಲ್ಲೇಖ (2), (3), (4) ಮತ್ತು (5)ರ ಆದೇಶ ಮುಖೇನ ಬೆಂಗಳೂರು ನಗರದಾದ್ಯಂತ ಭೌಗೋಳಿಕ ವ್ಯಾಪ್ತಿಯಲ್ಲಿ ಅಂಚೆ ಪಿನ್‌ಕೋಡ್ ಆಧಾರದ ಮೇಲೆ ಹೊಸದಾಗಿ 17 ಕಛೇರಿಗಳು ಸೇರಿದಂತೆ ಒಟ್ಟು 33 ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಕಛೇರಿಗಳನ್ನು ನಿಯೋಜಿಸಿ, ವ್ಯಾಪಾರಸ್ಥರು ಮೌಲ್ಯವರ್ಧಿತ ತೆರಿಗೆ ಕಾಯ್ದೆ ಅಡಿ ಪಾವತಿಸುವ ತೆರಿಗೆಯನ್ನು ಸಂಗ್ರಹಿಸಲು ಆದೇಶಿಸಲಾಗಿತ್ತು. ಈ ರೀತಿ ವಿಭಜಿಸುವಾಗ ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಕಚೇರಿ–130 ಕಚೇರಿಯನ್ನು ವಿಭಜಿಸಿರಲಿಲ್ಲ. ಉಲ್ಲೇಖ(6)ರ ಪತ್ರದಲ್ಲಿ ಜಂಟಿ ಆಯುಕ್ತರು ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಕಚೇರಿ–130 ರಲ್ಲಿ 7854 ನೋಂದಾಯಿತ ವರ್ತಕರಿದ್ದು, ಎಲ್ಲಾ ವರ್ತಕರು ಸಮರ್ಪಕವಾಗಿ ನಮೂನೆ ನೀಡುತ್ತಿರುವರೇ, ತೆರಿಗೆ ಪಾವತಿಸುತ್ತಿರುವರೇ ಹಾಗೂ ನೀಡಿದ ಚೆಕ್ಕುಗಳು ಹಣ ಪಾವತಿಯಾಗದೆ ಹಿಂತಿರುಗಿಸಿದ ಪ್ರಕರಣಗಳಲ್ಲಿ ಸೂಕ್ತ ಕ್ರಮಗಳನ್ನು ಕೈಗೊಳ್ಳಲಾಗಿದೆಯೇ ಎಂಬುದರ ಬಗ್ಗೆ ನಿಗಾವಹಿಸಬೇಕಾಗುತ್ತದೆ. ಆದರೆ ಈ ಕಾರ್ಯವು ಸಮರ್ಪಕವಾಗಿ ನಿರ್ವಹಿಸಲು ಸಾಧ್ಯವಾಗುತ್ತಿಲ್ಲ ಹಾಗೂ ಹಾಲಿ ಇರುವ ಅಧಿಕಾರಿ ಮತ್ತು ನೌಕರರಿಂದ ಕಾರ್ಯನಿರ್ವಹಿಸಲು ಕಷ್ಟವಾದ್ದರಿಂದ ರಾಜ್ಯದ ರಾಜಸ್ವ ಸಂಗ್ರಹಣೆಯ ಹಿತದೃಷ್ಟಿಯಿಂದ ಹಾಗೂ ಕಾಯ್ದೆಯನ್ನು ಸಮರ್ಪಕವಾಗಿ ಜಾರಿಗೊಳಿಸುವ ಉದ್ದೇಶದಿಂದ ಪ್ರಸ್ತುತ ಇರುವ ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಕಛೇರಿ–130 ಅನ್ನು ಮರುವಿಂಗಡಿಸುವುದು ಅನಿವಾರ್ಯವಾಗಿದೆ ಎಂದು ತಿಳಿಸಿರುತ್ತಾರೆ.

2. ಈ ಹಿನ್ನೆಲೆಯಲ್ಲಿ ರಾಜ್ಯದ ರಾಜಸ್ವ ಸಂಗ್ರಹಣೆಯ ಬೆಳವಣಿಗೆಯಲ್ಲಿ ತೀವ್ರವಾದ ಏರಿಕೆಯನ್ನು ತರಬಹುದೆಂಬ ಉದ್ದೇಶದಿಂದ ಹಾಗೂ ಪ್ರತಿ ಮೌಲ್ಯವರ್ಧಿತ ತೆರಿಗೆ ಕಛೇರಿಯಲ್ಲಿ ಕಡಿಮೆ ನೊಂದಾಯಿತ ವರ್ತಕರಿದ್ದಲ್ಲಿ ಅವರು ಸಲ್ಲಿಸುವ ದಾಖಲೆಗಳನ್ನು ಪರಿಶೀಲಿಸಿ, ಕಂಡುಬಂದ ನ್ಯೂನತೆಗಳನ್ನು ಆಧರಿಸಿ ತಕ್ಷಣ ಕ್ರಮ ಕೈಗೊಳ್ಳಬಹುದಾಗಿದೆ. ಇದರಿಂದಾಗಿ ತೆರಿಗೆ ಸಂಗ್ರಹಣೆಯಲ್ಲಿ ಉಪಯುಕ್ತತೆಯಾಗುತ್ತದೆ ಮತ್ತು ವರ್ತಕರು ನೀಡುವ ನಮೂನೆಗಳನ್ನು, ಪಾವತಿಸುವ ತೆರಿಗೆ, ಹೂಡುವಳಿ ತೆರಿಗೆಯ ಪೂರ್ಣ ವಿವರಗಳನ್ನು ಪರಿಶೀಲಿಸಬಹುದಾದ್ದರಿಂದ ತೆರಿಗೆ ವಂಚನೆಯನ್ನು ತಡೆಹಿಡಿಯಬಹುದಾಗಿದೆ. ಇದು ರಾಜ್ಯದ ರಾಜಸ್ವ ಸಂಗ್ರಹಣೆಯನ್ನು ಹೆಚ್ಚಿಸುವಲ್ಲಿ ಬಹಳ ಉಪಯುಕ್ತತೆಯಾಗುತ್ತದೆ. ಆದ್ದರಿಂದ ಬೆಂಗಳೂರು ನಗರದ ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು (ಆಡಳಿತ), ಮೌಲ್ಯವರ್ಧಿತ ತೆರಿಗೆ ವಿಭಾಗ–1, ಬೆಂಗಳೂರು, ಇವರ ವ್ಯಾಪ್ತಿಯಲ್ಲಿ ಬರುವ ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಕಛೇರಿ–130 ಈ ಕಛೇರಿಯನ್ನು ವಿಭಜಿಸಿ ಭೌಗೋಳಿಕ ವ್ಯಾಪ್ತಿಯಲ್ಲಿ ಅಂಚೆ ಪಿನ್‌ಕೋಡ್ ಆಧಾರದ ಮೇಲೆ ಪುನರ್ ವಿಂಗಡಣೆಗೊಳಿಸಲು ಉದ್ದೇಶಿಸಿದೆ.

| ಕ್ರ.ಸಂ. | ಪ್ರಸ್ತುತ ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಕಛೇರಿಗಳು | ಮರುವಿಂಗಡಿಸಿದ ಮೌಲ್ಯವರ್ಧಿತ ತೆರಿಗೆ ಕಛೇರಿಗಳು |
|---|---|---|
| 1 | ಎಲ್.ವಿ.ಓ–130, ಅಭಯ ಭವನ, ಶೇಷಾದ್ರಿಪುರಂ ಬೆಂಗಳೂರು. | 1) ಎಲ್.ವಿ.ಓ–130, ಬೆಂಗಳೂರು.<br>2) ಎಲ್.ವಿ.ಓ–130 (ಅಪರ), ಬೆಂಗಳೂರು. |

3. ಈ ರೀತಿಯಾಗಿ ಮರುವಿಂಗಡಣೆಗೊಳಿಸಿದ ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಕಛೇರಿಗಳಿಗೆ ಕೆಳಕಂಡಂತೆ ಭೌಗೋಳಿಕ ಆಧಾರವನ್ನಾಗಿ ಅಂಚೆ ಪಿನ್‌ಕೋಡ್ ಸಂಖ್ಯೆಗಳನ್ನು ನೀಡಲು ನಿರ್ಧರಿಸಲಾಗಿದೆ. ಇವುಗಳ ವಿವರಗಳು ಕೆಳಕಂಡಂತಿವೆ.

| ಕ್ರ. ಸಂ. | ಕಛೇರಿಗಳು | ಅಂಚೆ ಪಿನ್‌ಕೋಡ್ ಸಂಖ್ಯೆ | ವರ್ತಕರ ಸಂಖ್ಯೆ | | ಕಛೇರಿಯ ಕಾರ್ಯವ್ಯಾಪ್ತಿ |
|---|---|---|---|---|---|
| | | | ಪಿನ್‌ಕೋಡ್ ವಾರು | ಒಟ್ಟು | |
| 1 | ಎಲ್.ವಿ.ಓ–130 | 560003<br>560080<br>560020 | 2808<br>402<br>978 | 4188 | ಮಲ್ಲೇಶ್ವರಂ<br>ಸದಾಶಿವನಗರ<br>ಶೇಷಾದ್ರಿಪುರಂ |
| 2 | ಎಲ್.ವಿ.ಓ–130 (ಅಪರ) | 560021 | 3666 | 3666 | ಶ್ರೀರಾಂಪುರಂ |

4. ಪುನರ್‌ವ್ಯವಸ್ಥೆಗೊಳಿಸಿದ ಕಛೇರಿಗಳ ಕಾರ್ಯನಿರ್ವಹಣೆಗೆ ಅಗತ್ಯವಾದ ಅಧಿಕಾರಿ ಹಾಗೂ ಸಿಬ್ಬಂದಿಗಳ ಹುದ್ದೆಯನ್ನು ಸ್ಥಳಾಂತರಿಸಲು ಉದ್ದೇಶಿಸಲಾಗಿದ್ದು, ಪ್ರತಿ ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಕಛೇರಿಗಳಿಗೆ ಕೆಳಕಂಡಂತೆ ಹುದ್ದೆಗಳನ್ನು ಮಂಜೂರು ಮಾಡಲು ಉದ್ದೇಶಿಸಲಾಗಿದೆ.

| ಕ್ರ. ಸಂ. | ಕಛೇರಿಗಳು | ವಾ.ತೆ.ಸ.ಆ | ವಾ.ತೆ.ಅ | ವಾ.ತೆ.ಪ | ಪ್ರ.ದ.ಸ. | ದ್ವಿ.ದ.ಸ. | ಬೆ. ಗಾರರು | ಕ.ವ | 'ಡಿ' ಗ್ರೂಪ್ |
|---|---|---|---|---|---|---|---|---|---|
| **1** | **2** | **3** | **4** | **5** | **6** | **7** | **8** | **9** | **10** |
| 1 | ಎಲ್.ವಿ.ಓ–130 | 1 | 1 | 1 | 3 | 5 | 1 | 2 | 2 |
| 2 | ಎಲ್.ವಿ.ಓ–130 (ಅಪರ) | 1 | 1 | 1 | 3 | 5 | 1 | 1 | 2 |

5. ಮೇಲ್ಕಂಡ ಅಪರ ಕಚೇರಿಗೆ ಬೇಕಾದ ಅಧಿಕಾರಿ ಹಾಗೂ ಸಿಬ್ಬಂದಿಗಳ ಹುದ್ದೆಯ ಸ್ಥಳಾಂತರದ ವಿವರವನ್ನು ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು (ಆಡಳಿತ), ಮೌಲ್ಯವರ್ಧಿತ ತೆರಿಗೆ ವಿಭಾಗ–1, ಬೆಂಗಳೂರು, ಇವರು ದಿನಾಂಕ 19–11–2011 ರ ಪತ್ರದಲ್ಲಿ ವಿವರವಾಗಿ ನೀಡಿರುತ್ತಾರೆ. ಅದನ್ನು ಆಧರಿಸಿ ಮೇಲ್ಕಂಡ ತ:ಖ್ತೆಯ ಅಂಕಣ (3) ರಿಂದ (10)ರವರೆಗೆ ಎರಡು ಕಛೇರಿಗಳಿಗೆ ಮಂಜೂರು ಮಾಡಿದ ಹುದ್ದೆಗಳಿಗೆ ಪೂರಕ ಸಿಬ್ಬಂದಿಯೊಂದಿಗೆ ಹುದ್ದೆಗಳನ್ನು ಸ್ಥಳಾಂತರಿಸುವ ಆದೇಶವನ್ನು ಪ್ರತ್ಯೇಕವಾಗಿ ನೀಡಲಾಗುತ್ತದೆ.

6. ಪುನರ್‌ವ್ಯವಸ್ಥೆಗೊಳಿಸಲು ಉದ್ದೇಶಿಸಿದ ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಕಛೇರಿಗಳ ಅಧಿಕಾರಿಗಳು ಮೌಲ್ಯವರ್ಧಿತ ತೆರಿಗೆ, ಕೇಂದ್ರ ಮಾರಾಟ ತೆರಿಗೆ ಮತ್ತು ಪ್ರವೇಶ ತೆರಿಗೆ ಕಾಯ್ದೆ ಅಡಿ ಬರುವ ಎಲ್ಲಾ ತರಹದ ಕಾರ್ಯವನ್ನು ನಿರ್ವಹಿಸುವ ಅಧಿಕಾರ ವ್ಯಾಪ್ತಿಯನ್ನು ಹೊಂದಿರುತ್ತಾರೆ. ಆಡಳಿತಾತ್ಮಕವಾಗಿ ಪುನರ್‌ವ್ಯವಸ್ಥೆಗೊಳಿಸಲಾದ ಕಛೇರಿಗಳ ವೇತನ ಬಟವಾಡೆ ಅಧಿಕಾರವನ್ನು ಸಂಬಂಧಿತ ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಕಛೇರಿಗಳ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರೇ ವೇತನ ಬಟವಾಡೆ ಮತ್ತಿತರ ಭತ್ಯೆಗಳನ್ನು ಖಜಾನೆಯಿಂದ ಪಡೆದು ಹಂಚುವ ಅಧಿಕಾರವನ್ನು ಹೊಂದಿರುತ್ತಾರೆ.

7. ಉಲ್ಲೇಖ (1)ರ ಸರ್ಕಾರದ ಆದೇಶದಲ್ಲಿ ಪುನರ್ ವಿಂಗಡಣೆ, ಪುನರ್ ವ್ಯವಸ್ಥೆ, ಸ್ಥಳಾಂತರ ಮಾಡುವ ಅಧಿಕಾರವನ್ನು ಸರ್ಕಾರ ಆಯುಕ್ತರಿಗೆ ಪ್ರತ್ಯಾಯೋಜಿಸಿರುವುದರಿಂದ, ಅದನ್ನು ಚಲಾಯಿಸಿ ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು(ಆಡಳಿತ), ಮೌಲ್ಯವರ್ಧಿತ ತೆರಿಗೆ ವಿಭಾಗ–1 ರ ಆಡಳಿತ ವ್ಯಾಪ್ತಿಯಲ್ಲಿ ಬರುವ ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಕಛೇರಿ–130ನ್ನು ವಿಭಜಿಸಿ ಎರಡು ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಕಛೇರಿಗಳನ್ನಾಗಿ ಪುನರ್ ವ್ಯವಸ್ಥೆಗೊಳಿಸಲು ಉದ್ದೇಶಿಸಲಾಗಿದೆ.

ಅದಕ್ಕಾಗಿ ಈ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಸಿಬ್ಬಂದಿ–3ಸಿ/ಸಿಆರ್–32/11–12, ದಿನಾಂಕ: 16–04–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಗನುಗುಣವಾಗಿ ಉಲ್ಲೇಖ (1)ರ ಸರ್ಕಾರದ ಆದೇಶದಲ್ಲಿ ಆಯುಕ್ತರಿಗೆ ನೀಡಿದ ಅಧಿಕಾರವನ್ನು ಉಪಯೋಗಿಸಿಕೊಂಡು, ನೊಂದಾಯಿತ ವರ್ತಕರು ಪಾವತಿಸುವ ತೆರಿಗೆ, ಹೂಡುವಳಿ ತೆರಿಗೆ ಮತ್ತು ಸಲ್ಲಿಸುವ ಮಾಸಿಕ ನಮೂನೆಗಳನ್ನು ಸಮಗ್ರವಾಗಿ

ಪರಿಶೀಲಿಸಿ, ತೆರಿಗೆ ವಂಚನೆಯನ್ನು ತಡೆಗಟ್ಟಿ ರಾಜ್ಯದ ರಾಜಸ್ವ ಸಂಗ್ರಹಣೆಯನ್ನು ಹೆಚ್ಚಿಸುವ ಹಿತದೃಷ್ಟಿಯಿಂದ ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು (ಆಡಳಿತ), ಮೌಲ್ಯವರ್ಧಿತ ತೆರಿಗೆ ವಿಭಾಗ–1, ಬೆಂಗಳೂರು, ಇವರ ಆಡಳಿತ ವ್ಯಾಪ್ತಿಯಲ್ಲಿರುವ ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಕಚೇರಿಯಾದ ಎಲ್.ವಿ.ಓ–130 ಅನ್ನು ಮರುವಿಂಗಡಣೆ ಮಾಡಿ ಕೆಳಕಂಡ ತ:ಖ್ತೆಯ ಅಂಕಣ 3ರಲ್ಲಿ ನಮೂದಿಸಿದಂತೆ ಎರಡು ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಕಛೇರಿಗಳನ್ನಾಗಿ ಪುನರ್ ವ್ಯವಸ್ಥೆಗೊಳಿಸಿ ಆದೇಶಿಸಿದೆ.

| ಕ್ರ.ಸಂ. | ಪ್ರಸ್ತುತ ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಕಛೇರಿಗಳು | ಮರುವಿಂಗಡಿಸಿದ ಮೌಲ್ಯವರ್ಧಿತ ತೆರಿಗೆ ಕಛೇರಿಗಳು |
|---|---|---|
| 1 | ಎಲ್.ವಿ.ಓ–130, ಅಭಯ ಭವನ, ಶೇಷಾದ್ರಿಪುರಂ ಬೆಂಗಳೂರು. | 1) ಎಲ್.ವಿ.ಓ–130, ಬೆಂಗಳೂರು.<br>2) ಎಲ್.ವಿ.ಓ–130 (ಅಪರ), ಬೆಂಗಳೂರು. |

ಮೇಲ್ಕಂಡಂತೆ ಪುನರ್ ವಿಂಗಡಣೆಗೊಳಿಸಲಾದ ಎಲ್ಲಾ ಎರಡು ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಕಛೇರಿಗಳ ಕಾರ್ಯನಿರ್ವಹಣೆಗೆ ಕೆಳಕಂಡಂತೆ ಅಂಚೆ ಪಿನ್‌ಕೋಡ್‌ಗಳನ್ನು ಆಧರಿಸಿ, ಭೌಗೋಳಿಕ ವ್ಯಾಪ್ತಿಯನ್ನು ನಿಗದಿಪಡಿಸಿದೆ.

| ಕ್ರ. ಸಂ. | ಕಛೇರಿಗಳು | ಅಂಚೆ ಪಿನ್‌ಕೋಡ್ ಸಂಖ್ಯೆ | ವರ್ತಕರ ಸಂಖ್ಯೆ | | ಕಛೇರಿಯ ಕಾರ್ಯವ್ಯಾಪ್ತಿ |
|---|---|---|---|---|---|
| | | | ಪಿನ್‌ಕೋಡ್ ವಾರು | ಒಟ್ಟು | |
| 1 | ಎಲ್.ವಿ.ಓ–130 | 560003<br>560080<br>560020 | 2808<br>402<br>978 | 4188 | ಮಲ್ಲೇಶ್ವರಂ<br>ಸದಾಶಿವನಗರ<br>ಶೇಷಾದ್ರಿಪುರಂ |
| 2 | ಎಲ್.ವಿ.ಓ–130 (ಅಪರ) | 560021 | 3666 | 3666 | ಶ್ರೀರಾಂಪುರಂ |

ಪುನರ್ ವ್ಯವಸ್ಥೆಗೊಳಿಸಿದ ಎಲ್ಲಾ ಎರಡು ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಕಛೇರಿಗಳ ಕಾರ್ಯನಿರ್ವಹಣೆಗೆ ಅಗತ್ಯವಾದ ಅಧಿಕಾರಿ ಹಾಗೂ ಸಿಬ್ಬಂದಿಗಳ ಹುದ್ದೆಯನ್ನು ಕೆಳಕಂಡಂತೆ ಮಂಜೂರು ಮಾಡಿ ಆದೇಶಿಸಿದೆ.

| ಕ್ರ. ಸಂ. | ಕಛೇರಿಗಳು | ವಾ.ತೆ.ಸ.ಆ | ವಾ.ತೆ.ಅ | ವಾ.ತೆ.ಪ | ಪ್ರ.ದ.ಸ. | ದ್ವಿ.ದ.ಸ. | ಬೆ. ಗಾರರು | ಕ.ವ | 'ಡಿ' ಗ್ರೂಪ್ |
|---|---|---|---|---|---|---|---|---|---|
| **1** | **2** | **3** | **4** | **5** | **6** | **7** | **8** | **9** | **10** |
| 1 | ಎಲ್.ವಿ.ಓ–130 | 1 | 1 | 1 | 3 | 5 | 1 | 2 | 2 |
| 2 | ಎಲ್.ವಿ.ಓ–130 (ಅಪರ) | 1 | 1 | 1 | 3 | 5 | 1 | 1 | 2 |

ಮೇಲ್ಕಂಡ ತ:ಖ್ತೆಯ ಅಂಕಣ (3) ರಿಂದ (10)ರವರೆಗೆ ಎರಡು ಕಛೇರಿಗಳಿಗೆ ಮಂಜೂರು ಮಾಡಿದ ಸಿಬ್ಬಂದಿಗಳು ಹಾಗೂ ಪೂರಕ ಹುದ್ದೆಯ ಸ್ಥಳಾಂತರವನ್ನು ಪ್ರತ್ಯೇಕ ಆದೇಶದಲ್ಲಿ ಹೊರಡಿಸಲಾಗುತ್ತದೆ.

ಪುನರ್‌ವ್ಯವಸ್ಥೆಗೊಳಿಸಿದ ಎರಡು ಮೌಲ್ಯವರ್ಧಿತ ತೆರಿಗೆ ಕಛೇರಿಗಳ ಅಧಿಕಾರಿಗಳು ಕರ್ನಾಟಕ ಮೌಲ್ಯವರ್ಧಿತ ತೆರಿಗೆ, ಕೇಂದ್ರ ಮಾರಾಟ ತೆರಿಗೆ ಮತ್ತು ಪ್ರವೇಶ ತೆರಿಗೆ ಕಾಯ್ದೆ ಅಡಿ ಎಲ್ಲಾ ಅಧಿಕಾರ ವ್ಯಾಪ್ತಿಯನ್ನು ಹೊಂದಿರುತ್ತಾರೆ. ಆಡಳಿತಾತ್ಮಕವಾಗಿ ಪುನರ್‌ವ್ಯವಸ್ಥೆಗೊಳಿಸಲಾದ ಕಛೇರಿಗಳ ವೇತನ ಬಟವಾಡೆ ಅಧಿಕಾರವನ್ನು ಸಂಬಂಧಿಸಿದ ಕಚೇರಿಯ ಮುಖ್ಯಾಧಿಕಾರಿಗಳಾದ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರುಗಳಿಗೆ ಅಧಿಕಾರ ನೀಡಲಾಗಿದೆ.

ಈ ವ್ಯವಸ್ಥೆ ದಿನಾಂಕ 01–04–2012 ರಿಂದ ಜಾರಿಗೆ ಬರುತ್ತದೆ.

**ವಾಣಿಜ್ಯ ತೆರಿಗೆಗಳ ಆಯುಕ್ತರು**

**ಪಿ.ಆರ್. 728** (ಕರ್ನಾಟಕ), ಬೆಂಗಳೂರು.

## ಪೊಲೀಸ್ ಇಲಾಖೆ

## ಪೊಲೀಸ್ ಕಮೀಷನರ್‌ರವರ ಕಛೇರಿ, ನಂ.1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ

### ಅಧಿಸೂಚನೆ

**ಸಂಖ್ಯೆ: 13/ಅಸೂ/ಅಸಿಪಿ/ಸಂವಿ/2012. ದಿನಾಂಕ: 04–05–2012**

ಬೆಂಗಳೂರು ನಗರ, ಇಂದಿರಾನಗರ ಸಂಚಾರ ಪೊಲೀಸ್ ಠಾಣೆ ವ್ಯಾಪ್ತಿಯಲ್ಲಿನ ಇಂದಿರಾನಗರ 1ನೇ ಹಂತದ 9ನೇ "ಎ" ಮುಖ್ಯ ರಸ್ತೆಯ ಎರಡೂ ಬದಿಗಳಲ್ಲಿ ವಾಸದ ಮನೆಗಳು ಹಾಗೂ ಕೆಲವು ಕಂಪನಿಗಳ ಕಟ್ಟಡಗಳಿದ್ದು ಸಂಚಾರ ದಟ್ಟಣೆ ಅಧಿಕವಾಗಿರುತ್ತೆ. ಈ ರಸ್ತೆಗೆ ಹೊಂದಿಕೊಂಡಂತೆ ಸಿ.ಎಂ.ಹೆಚ್ ರಸ್ತೆ ಇದ್ದು, ಈ ರಸ್ತೆಯಲ್ಲಿ ಅನೇಕ ವಾಣಿಜ್ಯ ಮಳಿಗೆಗಳು ಮತ್ತು ಹೋಟೆಲ್‌ಗಳಿದ್ದು ದ್ವಿಮುಖ ಸಂಚಾರ ವ್ಯವಸ್ಥೆ ಇರುತ್ತದೆ. ಈ ರಸ್ತೆಯಲ್ಲಿ ಎರಡೂ ಕಡೆಗಳಿಂದ ವಾಹನಗಳ ಸಂಚಾರ ಅಧಿಕವಾಗಿದ್ದು ಸಂಚಾರ ದಟ್ಟಣೆ ಹೆಚ್ಚಿರುತ್ತೆ. ಸಿ.ಎಂ.ಹೆಚ್ ರಸ್ತೆಯಲ್ಲಿ ಮಿತಿಯಾಗಿ ವಾಹನಗಳ ನಿಲುಗಡೆಗೆ ವ್ಯವಸ್ಥೆ ಇದ್ದು, ವಾಹನ ನಿಲುಗಡೆಗೆ ಸ್ಥಳ ಸಿಗದೇ ಇದ್ದವರು 9ನೇ "ಎ" ಮುಖ್ಯ ರಸ್ತೆಯ ಎರಡೂ ಬದಿಗಳಲ್ಲಿ ವಾಹನಗಳನ್ನು ನಿಲ್ಲಿಸುತ್ತಿರುವುದರಿಂದ ವಾಹನಗಳ ಹಾಗೂ ಪಾದಚಾರಿಗಳ ಸುಗಮ ಸಂಚಾರಕ್ಕೆ ಅಡಚಣೆಯಾಗುತ್ತಿರುವ ಜೊತೆಗೆ ಈ ರಸ್ತೆಯಲ್ಲಿ ವಾಸವಾಗಿರುವ ನಿವಾಸಿಗಳು ಹಾಗೂ ಹಿರಿಯ ನಾಗರೀಕರಿಗೆ ರಸ್ತೆಯಲ್ಲಿ ಓಡಾಡಲು ಕಷ್ಟವಾಗಿರುತ್ತೆ. ಈ 9ನೇ "ಎ" ಮುಖ್ಯ ರಸ್ತೆಯಲ್ಲಿ ಸಂಚಾರ ದಟ್ಟಣೆಯನ್ನು ವ್ಯವಸ್ಥಿತವಾಗಿ ನಿಯಂತ್ರಿಸಲು ಹಾಗೂ ಸುಗಮ ವಾಹನ ಸಂಚಾರ ಮತ್ತು ಪಾದಚಾರಿಗಳ ಹಿತದೃಷ್ಟಿಯಿಂದ ಈ ರಸ್ತೆಯಲ್ಲಿ ಅದಲು ಬದಲು ದಿನಗಳಲ್ಲಿ ವಾಹನ ನಿಲುಗಡೆ ವ್ಯವಸ್ಥೆ ಜಾರಿಗೆ ತರುವುದು ಅವಶ್ಯಕವಾಗಿರುತ್ತೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಬಿ.ಜಿ. ಜ್ಯೋತಿಪ್ರಕಾಶ್ ಮಿರ್ಜಿ, ಐಪಿಎಸ್, ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಇಂದಿರಾನಗರ 1ನೇ ಹಂತ, 9ನೇ "ಎ" ಮುಖ್ಯ ರಸ್ತೆಯಲ್ಲಿ ಕೆಳಕಂಡಂತೆ ವಾಹನ ನಿಲುಗಡೆ ಮತ್ತು ನಿಷೇಧ ಸಂಬಂಧ ಮಾರ್ಪಾಡನ್ನು ಮಾಡಿ ಜಾರಿಗೆ ತರಲು ಆದೇಶಿಸಿರುತ್ತೇನೆ.

**"ಇಂದಿರಾನಗರ 1ನೇ ಹಂತ 9ನೇ "ಎ" ಮುಖ್ಯ ರಸ್ತೆಯಲ್ಲಿ ಪೂರ್ವ ದಿಕ್ಕಿನ ಸಿ.ಎಂ.ಹೆಚ್ ಆಸ್ಪತ್ರೆ ಓ.ಪಿ.ಡಿ ಯಿಂದ ಪಶ್ಚಿಮ ದಿಕ್ಕಿನ 100 ಅಡಿ ರಸ್ತೆಯವರೆಗೆ ಅದಲು ಬದಲು ದಿನಗಳಲ್ಲಿ ಅಂದರೆ ಬೆಸ ಸಂಖ್ಯೆಯ ದಿನಾಂಕಗಳಂದು ರಸ್ತೆಯ ದಕ್ಷಿಣಕ್ಕೆ ಹಾಗೂ ಸರಿ ಸಂಖ್ಯೆಯ ದಿನಾಂಕಗಳಂದು ರಸ್ತೆಯ ಉತ್ತರಕ್ಕೆ ವಾಹನಗಳ ನಿಲುಗಡೆ ಮಾಡಲು ಆದೇಶಿಸಿದೆ"**

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಮೇಲ್ಕಂಡ ನಿರ್ಬಂಧನೆಯನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ: 05–05–2012 ರಿಂದ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿವಸ ಅಂದರೆ ದಿನಾಂಕ: 04–05–2012 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಬಿ.ಜಿ. ಜ್ಯೋತಿಪ್ರಕಾಶ್ ಮಿರ್ಜಿ**
ಪೊಲೀಸ್ ಕಮೀಷನರ್,
ಬೆಂಗಳೂರು ನಗರ.

**ಪಿ.ಆರ್. 662**

## ಪೊಲೀಸ್ ಇಲಾಖೆ

## ಪೊಲೀಸ್ ಕಮೀಷನರ್‌ರವರ ಕಛೇರಿ, ನಂ.1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ

### ಕರಡು ಅಧಿಸೂಚನೆ

**ಸಂಖ್ಯೆ:/ 16/ಅಸೂ/ಡಿಸಿಪಿ/ಸಂಪ/2012. ದಿನಾಂಕ: 21.05.2012**

ಬೆಂಗಳೂರು ನಗರ – ಅಶೋಕನಗರ ಸಂಚಾರ ಪೊಲೀಸ್ ಠಾಣಾ ವ್ಯಾಪ್ತಿಯ ಕೆ.ಬಿ.ಎ.ಆರ್ ರಸ್ತೆಯು ಓ.ಆರ್.ಸಿ ರಸ್ತೆಯ ಅಂಬೇಡ್ಕರ್ ಜಂಕ್ಷನ್‌ನಿಂದ ಬಜಾರ್‌ಸ್ಟ್ರೀಟ್ ಜಂಕ್ಷನ್ ವರೆಗೆ ಇದ್ದು ಸುಮಾರು 3/4 ಕೀ.ಮೀ ಉದ್ದದ ರಸ್ತೆಯಾಗಿರುತ್ತದೆ. ಸದರಿ ರಸ್ತೆಯಲ್ಲಿ ದಿನದ ಎಲ್ಲಾ ವೇಳೆಯಲ್ಲಿಯೂ ಸಹ ಸಂಚಾರ ದಟ್ಟಣೆ ಅಧಿಕವಾಗಿದ್ದು. ರಸ್ತೆಯಲ್ಲಿ ವ್ಯಾಪಾರ ವಾಣಿಜ್ಯಮಳಿಗೆಗಳು, ಪೂಜಾ ಮಂದಿರಗಳು, ವಾಸದ ಮನೆಗಳು, ಶಾಲಾಕಾಲೇಜುಗಳಲ್ಲದೆ ನೀಲಸಂದ್ರ ಬಿ.ಎಂ.ಟಿ.ಸಿ ಬಸ್ಸು ನಿಲ್ದಾಣವೂ ಸಹ ಸದರಿ ರಸ್ತೆಗೆ ಹೊಂದಿಕೊಂಡಂತೆ ಇರುತ್ತದೆ. ಇದರಿಂದ ದಿನದ ಎಲ್ಲಾ ವೇಳೆಯಲ್ಲಿಯೂ ರಸ್ತೆಯು ಜನಜಂಗುಳಿಯಿಂದ ಕೂಡಿದ್ದು ವಾಹನಗಳು ರಸ್ತೆಯಲ್ಲಿ ಎಲ್ಲೆಂದರಲ್ಲಿ ಅಡ್ಡಾದಿಡ್ಡಿಯಾಗಿ ನಿಲುಗಡೆ ಮಾಡಿ ಸುಗಮ ಸಂಚಾರಕ್ಕೆ ಅಡಚಣೆಯುಂಟಾಗುತ್ತಿರುವ ಜೊತೆಗೆ ಸಂಚಾರ ಸ್ಥಗಿತಕ್ಕೆ ಹಾಗೂ ಅಪಘಾತಗಳಿಗೆ ಕಾರಣವಾಗುತ್ತಿದೆ. ಕೆ.ಬಿ.ಎ.ಆರ್ ರಸ್ತೆಯು ಪ್ರಸ್ತುತ ದ್ವಿಮುಖ ಸಂಚಾರ ವ್ಯವಸ್ಥೆಯುಳ್ಳ ರಸ್ತೆಯಾಗಿರುವುದು ಮಾತ್ರವಲ್ಲದೆ ಈ ರಸ್ತೆಯಲ್ಲಿ ಆಸ್ಟ್ರಿನ್ ಟೌನ್ ಮತ್ತು ರೋಸ್‌ಗಾರ್ಡನ್‌ಗೆ ಬಂದು ಹೋಗುವ ಎಲ್ಲಾ

ಬಿ.ಎಂ.ಟಿ.ಸಿ ಬಸ್ಸುಗಳು ಸಂಚರಿಸುವುದರಿಂದ, ಸಂಚಾರದ ಒತ್ತಡ ಅಧಿಕವಾಗಿ ಅಗಾಗ್ಗೆ ಸಂಚಾರವು ಸ್ಥಗಿತಗೊಂಡು ಸುಗಮ ಸಂಚಾರಕ್ಕೆ ತೊಂದರೆಯಾಗಿರುತ್ತದೆ. ಅದ್ದರಿಂದ, ಅಶೋಕನಗರ ಸಂಚಾರ ಪೊಲೀಸ್ ಠಾಣಾ ಸರಹದ್ದಿನ ಕೆ.ಬಿ.ಎ.ಆರ್. ರಸ್ತೆಯಲ್ಲಿ, ಓ.ಆರ್.ಸಿ. ರಸ್ತೆಯ ಅಂಬೇಡ್ಕರ್ ಜಂಕ್ಷನ್‌ನಿಂದ ನೀಲಸಂದ್ರ ಮುಖ್ಯರಸ್ತೆ ಬಜಾರ್‌ಸ್ಟ್ರೀಟ್ ಜಂಕ್ಷನ್ ವರೆಗೆ ರಸ್ತೆಯ ಪೂರ್ವ ಭಾಗದಲ್ಲಿ ಸಮ ಸಂಖ್ಯೆ (2,4,6,8) ದಿನಗಳಂದು ಹಾಗು ಪಶ್ಚಿಮ ಭಾಗದಲಿ ಬೆಸ ಸಂಖ್ಯೆ (1,3,5,7) ದಿನಗಳಂದು ದ್ವಿಚಕ್ರ ಮತ್ತು ನಾಲ್ಕು ಚಕ್ರ ವಾಹನಗಳ ನಿಲುಗಡೆಗೆ ಅವಕಾಶ ಕಲ್ಪಿಸಿ ಅಧಿಸೂಚನೆ ಹೊರಡಿಸುವುದು ಅವಶ್ಯಕವಾಗಿರುತ್ತದೆ.

ಆದ್ದರಿಂದ ಕಲಂ:115 ಮೋಟಾರು ವಾಹನ ಕಾಯ್ದೆ 1988 ಹಾಗೂ ಕಲಂ:3, ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರ ಪ್ರಕಾರ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಬಿ.ಜಿ. ಜ್ಯೋತಿ ಪ್ರಕಾಶ್ ಮಿರ್ಜಿ ಐ.ಪಿ.ಎಸ್, ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಅಶೋಕನಗರ ಸಂಚಾರ ಪೊಲೀಸ್ ಠಾಣಾ ಸರಹದ್ದಿನ ಕೆ.ಬಿ.ಎ.ಆರ್. ರಸ್ತೆಯಲ್ಲಿ, ಓ.ಆರ್.ಸಿ. ರಸ್ತೆಯ ಅಂಬೇಡ್ಕರ್ ಜಂಕ್ಷನ್‌ನಿಂದ ನೀಲಸಂದ್ರ ಮುಖ್ಯರಸ್ತೆ ಬಜಾರ್‌ಸ್ಟ್ರೀಟ್ ಜಂಕ್ಷನ್ ವರೆಗೆ ಈ ಕೆಳಕಂಡ ಮಾರ್ಪಾಟುಗಳನ್ನು ಮಾಡಿ ಆದೇಶಿಸಿರುತ್ತೇನೆ.

**"ಅಶೋಕನಗರ ಸಂಚಾರ ಪೊಲೀಸ್ ಠಾಣಾ ಸರಹದ್ದಿನ ಕೆ.ಬಿ.ಎ.ಆರ್. ರಸ್ತೆಯಲ್ಲಿ, ಓ.ಆರ್.ಸಿ. ರಸ್ತೆಯ ಅಂಬೇಡ್ಕರ್ ಜಂಕ್ಷನ್‌ನಿಂದ ನೀಲಸಂದ್ರ ಮುಖ್ಯರಸ್ತೆ ಬಜಾರ್‌ಸ್ಟ್ರೀಟ್ ಜಂಕ್ಷನ್ ವರೆಗೆ ರಸ್ತೆಯ ಪೂರ್ವ ಭಾಗದಲ್ಲಿ ಸಮ ಸಂಖ್ಯೆ (2,4,6,8) ದಿನಗಳಂದು ಹಾಗು ಪಶ್ಚಿಮ ಭಾಗದಲಿ ಬೆಸ ಸಂಖ್ಯೆ (1,3,5,7) ದಿನಗಳಂದು ದ್ವಿಚಕ್ರ ಮತ್ತು ನಾಲ್ಕು ಚಕ್ರ ವಾಹನಗಳ ನಿಲುಗಡೆಗೆ ಅವಕಾಶ ಕಲ್ಪಿಸಲಾಗಿದೆ.."**

ಅಂತಯೇ ಕಲಂ:116 ಮೋಟಾರು ವಾಹನ ಕಾಯ್ದೆ 1988 ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಮೇಲ್ಕಂಡ ನಿರ್ಬಂಧನೆಗಳನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಪೊಲೀಸ್ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ: 22.05.2012 ರಿಂದ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿವಸ ದಿನಾಂಕ: 21.05.2012 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಬಿ.ಜಿ. ಜ್ಯೋತಿಪ್ರಕಾಶ್ ಮಿರ್ಜಿ**
ಪೊಲೀಸ್ ಕಮೀಷನರ್,
ಬೆಂಗಳೂರು ನಗರ.

**ಪಿ.ಆರ್. 756**

## ಪೊಲೀಸ್ ಇಲಾಖೆ

## ಪೊಲೀಸ್ ಕಮೀಷನರ್‌ರವರ ಕಛೇರಿ, ನಂ.1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ

## ಕರಡು ಅಧಿಸೂಚನೆ

**ಸಂಖ್ಯೆ: 15/ಅಸೂ/ಡಿಸಿಪಿ/ಸಂ.ಪ/2012. ದಿನಾಂಕ: 21.05.2012.**

ಬೆಂಗಳೂರು ನಗರ – ಅಶೋಕನಗರ ಸಂಚಾರ ಪೊಲೀಸ್ ಠಾಣಾ ವ್ಯಾಪ್ತಿಯ ಬಜಾರ್ ಸ್ಟ್ರೀಟ್ ರಸ್ತೆಯು ನೀಲಸಂದ್ರ ಮುಖ್ಯರಸ್ತೆ ಬಜಾರ್‌ಸ್ಟ್ರೀಟ್ ಜಂಕ್ಷನ್ ನಿಂದ ನಾಲಾರಸ್ತೆ ಜಂಕ್ಷನ್ ವರೆಗೆ ಇದ್ದು ಸದರಿ ರಸ್ತೆಯು ಸುಮಾರು 600 ಮೀಟರ್ ಉದ್ದದ ರಸ್ತೆಯಾಗಿರುತ್ತದೆ. ಸದರಿ ರಸ್ತೆಯಲ್ಲಿ ದಿನದ ಎಲ್ಲಾ ವೇಳೆಯಲ್ಲಿಯೂ ಸಹ ಸಂಚಾರ ದಟ್ಟಣೆ ಅಧಿಕವಾಗಿದ್ದು, ರಸ್ತೆಯ ಎರಡೂ ಬದಿಯಲ್ಲಿ ವ್ಯಾಪಾರ ವಾಣಿಜ್ಯಮಳಿಗೆಗಳು ಪೂಜಾ ಮಂದಿರಗಳು ಇದ್ದು ಇಲ್ಲಿಗೆ ಬರುವ ಗ್ರಾಹಕರು ಮತ್ತು ಭಕ್ತರು ತಮ್ಮ ವಾಹನಗಳನ್ನು ರಸ್ತೆಯಲ್ಲಿ ಎಲ್ಲೆಂದರಲ್ಲಿ ಅಡ್ಡಾ–ದಿಡ್ಡಿಯಾಗಿ ನಿಲುಗಡೆ ಮಾಡುವುದರಿಂದ ಸುಗಮ ಸಂಚಾರಕ್ಕೆ ಅಡಚಣೆಯಾಗುವುದರ ಜೊತೆಗೆ ಸಂಚಾರ ಸ್ಥಗಿತಕ್ಕೆ ಹಾಗೂ ಅಪಘಾತಗಳಿಗೆ ಕಾರಣವಾಗುತ್ತಿದ್ದು, ಪ್ರತಿ ತಿಂಗಳ ಮೂರನೇ ಶನಿವಾರದಂದು ಠಾಣೆಯಲ್ಲಿ ನಡೆಸುವ ಸಂಚಾರ ಸಲಹಾ ಸಮಿತಿ ಸದಸ್ಯರ ಸಭೆಯಲ್ಲಿ ಸಂಚಾರ ಸಮಸ್ಯೆಯನ್ನು ಬಗೆಹರಿಸಲು ಸ್ಥಳೀಯ ಸದಸ್ಯರು ಒತ್ತಾಯಿಸಿರುತ್ತಾರೆ. ನೀಲಸಂದ್ರ ಬಜಾರ್ ಸ್ಟ್ರೀಟ್ ರಸ್ತೆಯು ದ್ವಿಮುಖ ಸಂಚಾರ ವ್ಯವಸ್ಥೆಯುಳ್ಳ ರಸ್ತೆಯಾಗಿರುವುದು ಮಾತ್ರವಲ್ಲದೆ ಈ ರಸ್ತೆಯಲ್ಲಿ ರೋಸ್‌ಗಾರ್ಡನ್‌ಗೆ ಬರುವ ಎಲ್ಲಾ ಬಿ.ಎಂ.ಟಿ.ಸಿ ಬಸ್ಸುಗಳು ಸಂಚರಿಸುವುದರಿಂದ ಸಂಚಾರವು ಅದಿಕಗೊಂಡು ಅಗಾಗ್ಗೆ ಸ್ಥಗಿತಗೊಂಡು ತುಂಬಾ ತೊಂದರೆಯಾಗಿರುತ್ತದೆ. ಅದ್ದರಿಂದ, ನೀಲಸಂದ್ರ ಬಜಾರ್ ಸ್ಟ್ರೀಟ್ ರಸ್ತೆಯಲ್ಲಿ, ನೀಲಸಂದ್ರ ಮುಖ್ಯರಸ್ತೆ ಬಜಾರ್‌ಸ್ಟ್ರೀಟ್ ಜಂಕ್ಷನ್ ನಿಂದ ನಾಲಾರಸ್ತೆ ಜಂಕ್ಷನ್ ವರೆಗೆ ರಸ್ತೆಯ ಉತ್ತರ ಭಾಗದಲ್ಲಿ ಬೆಸ ಸಂಖ್ಯೆ (1,3,5,7) ದಿನಗಳಂದು ಹಾಗು ದಕ್ಷಿಣದ ಭಾಗದಲ್ಲಿ ಸಮ ಸಂಖ್ಯೆ (2,4,6,8) ದಿನಗಳಂದು ದ್ವಿಚಕ್ರ ಮತ್ತು ನಾಲ್ಕು ಚಕ್ರ ವಾಹನಗಳ ನಿಲುಗಡೆಗೆ ಅವಕಾಶ ಕಲ್ಪಿಸಿ ಅಧಿಸೂಚನೆ ಹೊರಡಿಸುವುದು ಅವಶ್ಯಕವಾಗಿರುತ್ತದೆ.

ಆದ್ದರಿಂದ ಕಲಂ:115 ಮೋಟಾರು ವಾಹನ ಕಾಯ್ದೆ 1988 ಹಾಗೂ ಕಲಂ:3, ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರ ಪ್ರಕಾರ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಬಿ.ಜಿ. ಜ್ಯೋತಿ ಪ್ರಕಾಶ್ ಮಿರ್ಜಿ ಐ.ಪಿ.ಎಸ್, ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಅಶೋಕನಗರ ಸಂಚಾರ ಪೊಲೀಸ್ ಠಾಣಾ ಸರಹದ್ದಿನ "ನೀಲಸಂದ್ರ ಬಜಾರ್ ಸ್ಟ್ರೀಟ್ ರಸ್ತೆಯಲ್ಲಿ, ನೀಲಸಂದ್ರ ಮುಖ್ಯರಸ್ತೆ ಬಜಾರ್‌ಸ್ಟ್ರೀಟ್ ಜಂಕ್ಷನ್ ನಿಂದ ನಾಲಾರಸ್ತೆ ಜಂಕ್ಷನ್ ವರೆಗೆ ಕೆಳಕಂಡ ಮಾರ್ಪಾಡುಗಳನ್ನು ಮಾಡಿ ಆದೇಶಿಸಿರುತ್ತೇನೆ.

**"ನೀಲಸಂದ್ರ ಬಜಾರ್ ಸ್ಟ್ರೀಟ್ ರಸ್ತೆಯಲ್ಲಿ, ನೀಲಸಂದ್ರ ಮುಖ್ಯರಸ್ತೆ ಬಜಾರ್‌ಸ್ಟ್ರೀಟ್ ಜಂಕ್ಷನ್ ನಿಂದ ನಾಲಾರಸ್ತೆ ಜಂಕ್ಷನ್ ವರೆಗೆ ರಸ್ತೆಯ ಉತ್ತರ ಭಾಗದಲ್ಲಿ ಬೆಸ ಸಂಖ್ಯೆ (1,3,5,7) ದಿನಗಳಂದು ಹಾಗು ದಕ್ಷಿಣದ ಭಾಗದಲ್ಲಿ ಸಮ ಸಂಖ್ಯೆ (2,4,6,8) ದಿನಗಳಂದು ದ್ವಿಚಕ್ರ ಮತ್ತು ನಾಲ್ಕು ಚಕ್ರ ವಾಹನಗಳ ನಿಲುಗಡೆಗೆ ಅವಕಾಶ ಕಲ್ಪಿಸಲಾಗಿದೆ."**

ಅಂತಯೇ ಕಲಂ:116 ಮೋಟಾರು ವಾಹನ ಕಾಯ್ದೆ 1988 ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಮೇಲ್ಕಂಡ ನಿರ್ಬಂಧನೆಗಳನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಪೊಲೀಸ್ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ: 22.05.2012 ರಿಂದ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಆದೇಶವನ್ನು ನಾನು ಈ ದಿವಸ ದಿನಾಂಕ: 21.05.2012 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಬಿ.ಜಿ. ಜ್ಯೋತಿಪ್ರಕಾಶ್ ಮಿರ್ಜಿ**
ಪೊಲೀಸ್ ಕಮೀಷನರ್,
ಬೆಂಗಳೂರು ನಗರ.

**ಪಿ.ಆರ್. 755**

## ಕೃಷಿ ನಿರ್ದೇಶಕರು ಹಾಗೂ ಶಿಸ್ತು ಪ್ರಾಧಿಕಾರಿಗಳು, ಬೆಂಗಳೂರು ಇವರ ನಡವಳಿಗಳು:

**ವಿಷಯ:** ಶ್ರೀ ಜಿ. ಹನುಮಂತರಾಯಪ್ಪ, ಕೃಷಿ ಸಹಾಯಕರು, ರೈತ ಸಂಪರ್ಕ ಕೇಂದ್ರ, ಬೇಗೂರು, ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಬೆಂಗಳೂರು ದಕ್ಷಿಣ ಇವರು ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಿಯಾದ ಬಗ್ಗೆ ಶಿಸ್ತುಕ್ರಮ.

**ಓದಲಾಗಿದೆ:**

1. ಜಂಟಿ ಕೃಷಿ ನಿರ್ದೇಶಕರು, ಬೆಂಗಳೂರು ನಗರ ಇವರ ಪತ್ರ ಸಂಖ್ಯೆ: ಜಕೃನಿ/ಬೆಂನಜಿ ವಿ/ಜಿ.ಹ/08–09, ದಿನಾಂಕ14–7–2008 ಮತ್ತು 5–1–2008.
2. ಇಲಾಖಾ ಆದೇಶ ಸಂಖ್ಯೆ: ಸಿಬ್ಬಂದಿ–1/ವಿಚಾರಣೆ–3/51/2007–08, ದಿನಾಂಕ 13–3–2009
3. ಇಲಾಖಾ ಪತ್ರ ಸಂಖ್ಯೆ: ಸಿಬ್ಬಂದಿ–1/ವಿಚಾರಣೆ–3/51/2007–08, ದಿನಾಂಕ 9–9–2009 ದೋಷಾರೋಪಣೆ ಪಟ್ಟಿ ಜಾರಿ.
4. ಇಲಾಖಾ ಆದೇಶ ಸಂಖ್ಯೆ: ಸಿಬ್ಬಂದಿ–1/ವಿಚಾರಣೆ–3/51/2007–08, ದಿನಾಂಕ 24–10–2009.
5. ಸಹಾಯಕ ಕೃಷಿ ನಿರ್ದೇಶಕರು, ಬೆಂಗಳೂರು ದಕ್ಷಿಣ ಇವರ ಪತ್ರ ಸಂಖ್ಯೆ: ಸಕೃನಿ/ ಬೆಂ.ದ/ಸಿಬ್ಬಂದಿ/ಜಿ.ಹ/ಕೃಸ/ಅ.ಗೈ.ಹಾ/2008–09 ದಿನಾಂಕ: 8–10–2009
6. ಸಹಾಯಕ ಕೃಷಿ ನಿರ್ದೇಶಕರು, ಬೆಂಗಳೂರು ದಕ್ಷಿಣ ಇವರ ಪತ್ರ ಸಂಖ್ಯೆ: ಸಕೃನಿ/ ಬೆಂ.ದ/ಸಿಬ್ಬಂದಿ/ಜಿ.ಹ/ಕೃಸ/ಅ.ಗೈ.ಹಾ/2008–09, ದಿನಾಂಕ:26/30–11–09
7. ಇಲಾಖಾ ಪತ್ರ ಸಂಖ್ಯೆ: ಸಿಬ್ಬಂದಿ–1/ವಿಚಾರಣೆ–3/51/2007–08, ದಿನಾಂಕ 30–6–2011.

**ಪ್ರಸ್ತಾವನೆ:–**

ಶ್ರೀ ಜಿ.ಹನುಮಂತರಾಯಪ್ಪ, ಕೃಷಿ ಸಹಾಯಕರು, ರೈತ ಸಂಪರ್ಕ ಕೇಂದ್ರ, ಬೇಗೂರು, ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಬೆಂಗಳೂರು ದಕ್ಷಿಣ ಇವರು ದಿನಾಂಕ 15–1–2005 ರಿಂದ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಿಯಾಗಿರುತ್ತಾರೆಂದು ಆರೋಪಿಸಿ ಓದಲಾದ ಕ್ರ.ಪಂ.(1) ರ ಪತ್ರದಲ್ಲಿ ಜಂಟಿ ಕೃಷಿ ನಿರ್ದೇಶಕರು, ಬೆಂಗಳೂರು ನಗರ ಇವರು ಇಲಾಖೆಗೆ ಪ್ರಸ್ತಾವನೆ ಸಲ್ಲಿಸಿ ಇವರ ವಿರುದ್ಧ ಶಿಸ್ತುಕ್ರಮ ಕೈಗೊಳ್ಳಲು ಕೋರಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಆರೋಪಿತರು ದಿನಾಂಕ 15–1–2005 ರಿಂದ ಈವರೆವಿಗೂ (ಸುಮಾರು 4 ವರ್ಷಗಳಿಂದ) ಕರ್ತವ್ಯಕ್ಕೆ ಗೈರು ಹಾಜರಾಗಿರುವ ಆರೋಪವು ದಾಖಲಾತಿಗಳಿಂದ ಮೇಲ್ನೋಟಕ್ಕೆ ಕಂಡು ಬಂದಿರುತ್ತದೆ. ಇವರ ಗೈರು ಹಾಜರಿಯ ಆರೋಪವನ್ನು ಗಂಭೀರವಾಗಿ ಪರಿಗಣಿಸಿ ಇವರ ವಿರುದ್ಧದ ಆರೋಪದ ಬಗ್ಗೆ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ ಓದಲಾದ ಕ್ರ.ಸಂ.(2) ರ ಇಲಾಖಾ ಆದೇಶದಲ್ಲಿ ಸದರಿ ನೌಕರರನ್ನು ಅಮಾನತ್ತಿನಲ್ಲಿಡಲಾಯಿತು. ಓದಲಾದ ಕ್ರ.ಸಂ.(3) ರಲ್ಲಿ ಸದರಿ ನೌಕರರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ,ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ 1957 ರ ನಿಯಮ 11 ರಡಿಯಲ್ಲಿ ಅನುಬಂಧ–1 ರಿಂದ 4 ರವರೆಗಿನ ದೋಷಾರೋಪಣೆ ಪಟ್ಟಿಯನ್ನು ಜಾರಿ ಮಾಡಲಾಯಿತು. ಓದಲಾದ ಕ್ರ.ಸಂ.(4) ರಲ್ಲಿ ಸದರಿ ನೌಕರರನ್ನು ನಿಲಂಬನೆಯಲ್ಲಿಟ್ಟು 6 ತಿಂಗಳು ಸಮೀಪಿಸುತ್ತಿರುವುದರಿಂದ ಹಾಗೂ ಈಗಾಗಲೇ ದೋಷಾರೋಪಣೆ ಪಟ್ಟಿ ಜಾರಿ ಮಾಡಿರುವುದರಿಂದ ನೌಕರರನ್ನು ನಿಲಂಬನೆಯಿಂದ ವಿಖಂಡನೆಗೊಳಿಸಿ ಸಹಾಯಕ ಕೃಷಿ ನಿರ್ದೇಶಕರು, ದೊಡ್ಡಬಳ್ಳಾಪುರ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇಲ್ಲಿ ಖಾಲಿ ಇರುವ ಕೃಷಿ ಸಹಾಯಕರ ಹುದ್ದೆಗೆ ನೇಮಿಸಿದೆ. ಸದರಿಯವರಿಗೆ ಆರೋಪದ ಬಗ್ಗೆ ದೋಷಾರೋಪಣಾ ಪಟ್ಟಿಯನ್ನು ಸಹಾಯಕ ಕೃಷಿ ನಿರ್ದೇಶಕರು, ಬೆಂಗಳೂರು ದಕ್ಷಿಣ ತಾಲ್ಲೂಕು ಇವರ ಮೂಲಕ ಜಾರಿ ಮಾಡಲಾಗಿ ನೊಂದಣಿ ಅಂಚೆ

ಸ್ವೀಕೃತಿ ಆಗದೇ ಮನೆ ಬಾಗಿಲು ಬೀಗ ಹಾಕಿರುತ್ತದೆ ಎಂಬ ಷರಾದೊಂದಿಗೆ ಹಿಂದಿರುಗಿ ಬಂದಿರುತ್ತದೆ. ಈ ವಿಷಯವನ್ನು (ಲಕೋಟೆ) ದಾಖಲಾತಿಗಳೊಂದಿಗೆ ಸಹಾಯಕ ಕೃಷಿ ನಿರ್ದೇಶಕರು , ಬೆಂಗಳೂರು ದಕ್ಷಿಣ ಇವರು ಓದಲಾದ ಕ್ರ.ಸಂ.(5)ರಲ್ಲಿ ತಿಳಿಸಿರುತ್ತಾರೆ. ಓದಲಾದ ಕ್ರ.ಸಂ.(6) ರಲ್ಲಿ ಸಹಾಯಕ ಕೃಷಿ ನಿರ್ದೇಶಕರು, ಬೆಂಗಳೂರು ದಕ್ಷಿಣ ಇವರು ಸದರಿಯವರಿಗೆ ದೋಷಾರೋಪಣಾ ಪಟ್ಟಿಯನ್ನು ಸಿ.ಸಿ.ಎ ನಿಯಮ 28 (ಎ) ರಂತೆ ಜಾರಿ ಮಾಡಿ ಮಹಜರ್ ವರದಿಯನ್ನು ಇಲಾಖೆಗೆ ಸಲ್ಲಿಸಿರುತ್ತಾರೆ. ಓದಲಾದ ಕ್ರ.ಸಂ.(7)ರಲ್ಲಿ ಪತ್ರಿಕಾ ಪ್ರಕಟಣೆಯ ಮೂಲಕ ಸದರಿಯವರಿಗೆ ಕೇಂದ್ರ ಕಛೇರಿಗೆ ಬಂದು ದೋಷಾರೋಪಣಾ ಪಟ್ಟಿ ಸ್ವೀಕರಿಸುವಂತೆ ಸೂಚಿಸಿ ತಪ್ಪಿದ್ದಲ್ಲಿ ನಿಯಮಾನುಸಾರ ಕ್ರಮ ಕೈಗೊಳ್ಳಲಾಗುವುದೆಂದು ಪ್ರಚಲಿತ ದಿನಪತ್ರಿಕೆಗಳಾದ ಪ್ರಜಾವಾಣಿ ಮತ್ತು ಸಂಯುಕ್ತ ಕರ್ನಾಟಕ ಪತ್ರಿಕೆಗಳಲ್ಲಿ ಪ್ರಕಟಣೆಯನ್ನು ದಿನಾಂಕ 12–7–2011 ರಂದು ಹೊರಡಿಸಲಾಗಿರುತ್ತದೆ. ಇಂದಿನವರೆಗೂ ಸದರಿಯವರು ಕಛೇರಿ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ ಹಾಗೂ ದೋಷಾರೋಪಣಾ ಪಟ್ಟಿ ಸ್ವೀಕರಿಸಿರುವುದಿಲ್ಲ ವಾದ್ದರಿಂದ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 14(ii)ರಡಿಯಲ್ಲಿ ಕ್ರಮಕೈಗೊಳ್ಳಲು ನಿರ್ಧರಿಸಿ ಈ ಕೆಳಕಂಡ ದಂಡನೆ ಆದೇಶವನ್ನು ಹೊರಡಿಸಲಾಗಿದೆ.

**ಕಛೇರಿ ಆದೇಶ ಸಂಖ್ಯೆ: ಸಿಬ್ಬಂದಿ–1/ವಿಚಾರಣೆ–3/51/2007–08, ದಿನಾಂಕ: 16–4–2012.**

ಈ ಕೆಳಗೆ ಸಹಿ ಮಾಡಿರುವ ಡಾ: ಕೆ.ವಿ.ಸರ್ವೇಶ್, ಕೃಷಿ ನಿರ್ದೇಶಕರು ಹಾಗೂ ಶಿಸ್ತು ಪ್ರಾಧಿಕಾರಿಗಳು, ಬೆಂಗಳೂರು ಆದ ನಾನು ಈ ಪ್ರಕರಣವನ್ನು ಕೂಲಂಕುಷವಾಗಿ ಪರಿಶೀಲಿಸಿ ಶ್ರೀ ಜಿ. ಹನುಮಂತರಾಯಪ್ಪ, ಕೃಷಿ ಸಹಾಯಕರು, ರೈತ ಸಂಪರ್ಕ ಕೇಂದ್ರ, ಬೇಗೂರು, ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಬೆಂಗಳೂರು ದಕ್ಷಿಣ ಇವರನ್ನು ಇವರ ವಿರುದ್ಧದ ಅನಧಿಕೃತವಾಗಿ ಗೈರುಹಾಜರಿ ಆರೋಪಗಳ ಬಗ್ಗೆ ವಿಚಾರಣಾ ಪ್ರಕ್ರಿಯೆಗಳಿಗೆ ಸ್ಪಂದಿಸದೇ ಇರುವುದರಿಂದ ಏಕಪಕ್ಷೀಯವಾಗಿ ನಿರ್ಣಯ ಕೈಗೊಂಡು ಇವರನ್ನು ಆರೋಪಿ ಎಂದು ಪರಿಗಣಿಸಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8(vi) ರಡಿಯಲ್ಲಿ ಈ ಕೆಳಕಂಡಂತೆ ದಂಡನೆ ವಿಧಿಸಿ ಆದೇಶಿಸಿರುತ್ತೇನೆ.

1. ಸದರಿಯವರನ್ನು ಸರ್ಕಾರಿ ಸೇವೆಯಿಂದ "ಕಡ್ಡಾಯ ನಿವೃತ್ತಿ" ಗೊಳಿಸಿ ಆದೇಶಿಸಿರುತ್ತೇನೆ.
2. ಸದರಿಯವರ ಅನಧಿಕೃತ ಗೈರುಹಾಜರಿಯನ್ನು "ಅನಧಿಕೃತ ಗೈರುಹಾಜರಿ" ಎಂದು ಪರಿಗಣಿಸಿ ಆದೇಶಿಸಿರುತ್ತೇನೆ.
3. ಸದರಿಯವರ ನಿಲಂಬನಾ ಅವಧಿಯನ್ನು "ನಿಲಂಭನಾ ಅವಧಿ" ಎಂದು ಪರಿಗಣಿಸಿ ಆದೇಶಿಸಿರುತ್ತೇನೆ.

**ಡಾ. ಕೆ.ವಿ.ಸರ್ವೇಶ್,**
ಕೃಷಿ ನಿರ್ದೇಶಕರು ಹಾಗೂ ಶಿಸ್ತು ಪ್ರಾಧಿಕಾರಿ

**ಪಿ.ಆರ್. 786**

## ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು, ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ. ಇವರ ನ್ಯಾಯಾಲಯದಲ್ಲಿ

**ಪ್ರಕರಣ ಸಂ: ಇಎಕ್ಸ್‌ಇ/ಚಿಪುರ/ಡಿಟಿಸಿಆರ್/190/2011–12, ದಿನಾಂಕ: 25/05/2012**

**ಉಪಸ್ಥಿತರು:– ಎನ್. ಚಂದ್ರಶೇಖರ, ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು, ಚಿಕ್ಕಬಳ್ಳಾಪುರ ಜಿಲ್ಲೆ.**

| **ಪಿರ್ಯಾದುದಾರರು:** | **ವಿರುದ್ಧ** | **ಆರೋಪಿ:** |
|---|---|---|
| ಆರಕ್ಷಕ ನಿರೀಕ್ಷಕರು | | ಲಕ್ಷ್ಮೀಪತಿ ಬಿನ್ ಲೇ॥ ವೆಂಕಟಪ್ಪ, |
| ಅಬಕಾರಿ ಜಾರಿ ಮತ್ತು ಲಾಟರಿ ನಿಷೇದ ದಳ, | | ಮೇಳ್ಯಾ ಗ್ರಾಮ, ನಗರಗೆರೆ ಹೋಬಳಿ, |
| ಚಿಕ್ಕಬಳ್ಳಾಪುರ. | | ಗೌರಿಬಿದನೂರು ತಾಲ್ಲೂಕು. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:01/11/2011 ರಂದು ಆರಕ್ಷಕ ನಿರೀಕ್ಷಕರು ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ ಚಿಕ್ಕಬಳ್ಳಾಪುರ ಇವರಿಗೆ ಬಂದ ಖಚಿತ ಬಾತ್ಮೀಯ ಮೇರೆಗೆ ಇವರು ತಮ್ಮ ಸಿಬ್ಬಂದಿ ಪಂಚರ ಸಮೇತ ಸರ್ಕಾರಿ ವಾಹನ ನೊಂದಣಿ ಸಂ:ಕೆಎ–40 ಜಿ–270 ರಲ್ಲಿ ಗೌರಿಬಿದನೂರು ತಾಲ್ಲೂಕು ಜಗರೆಡ್ಡಿಹಳ್ಳಿ ಗ್ರಾಮದ ಆಂಜನೇಯ ಸ್ವಾಮಿ ದೇವಸ್ಥಾನದ ಸ್ವಲ್ಪ ದೂರದ ಮರೆಯಲ್ಲಿ ನಿಲ್ಲಿಸಿ ರಸ್ತೆಕಾವಲು ಮಾಡುತ್ತಿದ್ದಾಗ ಸಮಯ ಬೆಳಿಗ್ಗೆ 10–30 ಗಂಟೆಯಲ್ಲಿ ಒಬ್ಬ ಆಸಾಮಿ ದ್ವಿಚಕ್ರ ವಾಹನದ ಹಿಂಭಾಗದ ಎರಡೂ ಕಡೆ ಎರಡೆರಡು ಕ್ಯಾನುಗಳನ್ನು ಕಟ್ಟಿಕೊಂಡು, ಬರುತ್ತಿದ್ದು, ಪೋಲೀಸರು ಸದರಿ ವಾಹನವನ್ನು ತಡೆದು ನಿಲ್ಲಿಸಿ ಪಂಚರ ಸಮಕ್ಷಮ ಕ್ಯಾನುಗಳನ್ನು ಪರಿಶೀಲಿಸಿದಾಗ ಈ ದ್ರವವನ್ನು ಪರಿಶೀಲಿಸಿ ನೋಡಲಾಗಿ ಇದರಲ್ಲಿ ಮಾನವನನ್ನು ಮೊಂಕುಗೊಳಿಸುವ ಅಥವಾ ಆರೋಗ್ಯಕ್ಕೆ ಕೇಡು ಉಂಟು ಮಾಡುವ ವಸ್ತುಗಳನ್ನು ಸೇರಿಸಿ ತಯಾರು ಮಾಡಿರುವಂತೆ ಕಂಡುಬಂದಿದ್ದು, ಪ್ರತಿ ಕ್ಯಾನ್‌ನಿಂದ ಎಫ್.ಎಸ್.ಎಲ್. (ರಾಸಾಯನಿಕ) ಪರೀಕ್ಷೆಗೆ ಕಳುಹಿಸುವ ಸಲುವಾಗಿ ತಲಾ 180 ಎಂ.ಎಲ್.ನ ಬಾಟಲಿನಲ್ಲಿ ಸೇಂದಿಯನ್ನು ತುಂಬಿ ಮುಚ್ಚಳ ಹಾಕಿ ಬಿಳಿ ಬಟ್ಟೆಯಿಂದ ಸುತ್ತಿ ದಾರದಿಂದ ಕಟ್ಟಿ 'ಎನ್' ಎಂಬ ಅಕ್ಷರದಿಂದ ಮೊಹರು ಮಾಡಿ ಸದರಿ ಕ್ಯಾನ್‌ಗಳಿಗೆ ಕ್ರಮವಾಗಿ 1,2,3,4 ಎಂಬ ಸಂಖ್ಯೆಯನ್ನು ನೀಡಲಾಯಿತು. ಒಂದೊಂದು ಕ್ಯಾನ್‌ನಲ್ಲಿ 40 ಲೀಟರ್‌ನಂತೆ 4 ಕ್ಯಾನ್‌ಗಳಲ್ಲಿ ಸುಮಾರು 160 ಲೀಟರ್ ಸೇಂದಿ ಇರುತ್ತದೆ. ನಂತರ ವಾಹನವನ್ನು ಪರಿಶೀಲಿಸಿ ನೋಡಲಾಗಿ ಅದು ಕೆಂಪು ಬಣ್ಣದ ಟಿವಿಎಸ್ ಮ್ಯಾಕ್ಸ್ 4(R) ರ ದ್ವಿಚಕ್ರವಾಹನವಾಗಿದ್ದು, ಇದರ ನೊಂದಣಿ ಸಂ:ಎಪಿ–02 ಎಹೆಚ್–3226 ಆಗಿದ್ದು, ಹಾಗೂ ಸೇಂದಿ ಸಾಗಾಣಿಕೆಯ ಪರವಾನಿಗೆ ಬಗ್ಗೆ ವಿಚಾರಿಸಲಾಗಿ ಆಸಾಮಿಯೂ ತನ್ನ ಬಳಿ ಯಾವುದೇ ಪರವಾನಿಗೆ ಇರುವುದಿಲ್ಲವೆಂದು

ತಿಳಿಸಿರುತ್ತಾನೆ. ತದನಂತರ ಆತನ ಹೆಸರು ವಿಳಾಸ ಕೇಳಿದಾಗ ತನ್ನ ಹೆಸರು ಲಕ್ಷ್ಮೀಪತಿ ಬಿನ್ ಲೇ॥ ವೆಂಕಟಪ್ಪ, 43–ವರ್ಷ, ಈಡಿಗರ ಜನಾಂಗ, ಸೇಂದಿ ಮಾರಾಟಗಾರ ಮೇಳ್ಯಾ ಗ್ರಮ ನಗರಗೆರೆ ಹೋಬಳಿ, ಗೌರಿಬಿದನೂರು ತಾಲ್ಲೂಕು ಎಂದು ತಿಳಿಸಿದನು. ವಾಹನ ಮತ್ತು ಸೇಂದಿಯನ್ನು ವಶಪಡಿಸಿಕೊಂಡು ಆರೋಪಿಯನ್ನು ದಸ್ತಗಿರಿ ಮಾಡಿ ಸದರಿ ಆರೋಪಿಯು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 32,34, 43(ಎ) ರ ರೀತ್ಯಾ ಶಿಕ್ಷಾರ್ಹ ಅಪರಾಧ ಮಾಡಿರುವುದರಿಂದ ಈ ಬಗ್ಗೆ ತಕ್ಷೀರು ಸಂ:91/2011, ದಿನಾಂಕ:01/12/2011 ರಲ್ಲಿ ಮೊಕದ್ದಮೆ ದಾಖಲಿಸಿಕೊಂಡು ಪ್ರಮಾವರದಿಯೊಂದಿಗೆ ಆರೋಪಿಯನ್ನು ನ್ಯಾಯಾಲಯಕ್ಕೆ ಹಾಜರುಪಡಿಸಿರುತ್ತಾರೆ. ತದನಂತರ ಪ್ರ.ಮಾ.ವ. ಮಹಜರ್ ಹಾಗೂ ಪಿ.ಎಫ್‌ನ್ನು ಪ್ರಾಧಿಕಾರಕ್ಕೆ ಸಲ್ಲಿಸಿ ಸೇಂದಿ ಮತ್ತು ವಾಹನವನ್ನು ಅಬಕಾರಿ ನಿರೀಕ್ಷಕರು, ಗೌರಿಬಿದನೂರು ವಲಯ ಇವರಿಗೆ ಹಸ್ತಾಂತರಿಸಲು ಅನುಮತಿ ನೀಡಬೇಕೆಂದು ಕೋರಿರುತ್ತಾರೆ.

ವಶಪಡಿಸಿಕೊಂಡಿರುವ ವಸ್ತುಗಳ ಪಟ್ಟಿ ನಂ:88/2011 ರಲ್ಲಿ ವಾಹನವನ್ನು ಅಬಕಾರಿ ನಿರೀಕ್ಷಕರು, ಗೌರಿಬಿದನೂರು ವಲಯ ಇವರಿಗೆ ಹಸ್ತಾಂತರ ಮಾಡಲು ಪ್ರಾಧಿಕಾರದಿಂದ ಅನುಮತಿ ನೀಡಲಾಗಿದೆ.

ಅಬಕಾರಿ ನಿರೀಕ್ಷಕರು, ಗೌರಿಬಿದನೂರು ವಲಯ ರವರು ತನಿಖೆಯನ್ನು ಮುಂದುವರೆಸಿ ಜಪ್ತುಪಡಿಸಿದ ಸೇಂದಿಯಿಂದ ತೆಗೆಯಲಾದ ಮಾದರಿಯನ್ನು ರಾಸಾಯನಿಕ ವಿಶ್ಲೇಷಣೆಗಾಗಿ ಕೇಂದ್ರ ರಾಸಾಯನಿಕ ಪ್ರಯೋಗಾಲಯ, ಅಬಕಾರಿ ಇಲಾಖೆ, ಬೆಂಗಳೂರು ಇವರಿಗೆ ಸಲ್ಲಿಸಿದ್ದು, ತಜ್ಞರ ವರದಿ ಸಂ:ಸಿಸಿಎಲ್:7086/2011, ದಿನಾಂಕ:16/11/2011 ರ ಪತ್ರದಂತೆ ಮಾದರಿಯಲ್ಲಿ ಮದ್ಯಸಾರದ ಅಂಶ 3.20 ರಿಂದ 3.35% ವಿ.ವಿ. ಇದ್ದು, ಇದರಲ್ಲಿ ಈಥೈಲ್ ಅಲ್ಕೋಹಾಲ್ ಮತ್ತು ಕ್ಲೋರಲ್ ಹೈಡ್ರೇಟ್ ಅಂಶ ಕಂಡುಬಂದಿದ್ದು, ಅವು ಮಾನವನ ಸೇವನೆಗೆ ಯೋಗ್ಯವಾಗಿರುವುದಿಲ್ಲ ಎಂದು ತಜ್ಞರು ಅಭಿಪ್ರಾಯ ನೀಡಿದ್ದು, ತಜ್ಞರ ವರದಿಯ ಪ್ರತಿಯನ್ನು ಅಬಕಾರಿ ನಿರೀಕ್ಷಕರು, ಗೌರಿಬಿದನೂರು ವಲಯ ರವರ ಪತ್ರ ದಿನಾಂಕ:31/03/2012 ರೊಂದಿಗೆ ಲಗತ್ತಿಸಿ ಈ ಮೊಕದ್ದಮೆಯಲ್ಲಿ ಜಪ್ತುಪಡಿಸಲಾದ 160 ಲೀ. ಸೇಂದಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ವರದಿ ಸಲ್ಲಿಸಿದ್ದು, ಅದರಂತೆ ಟಿವಿಎಸ್ ಮ್ಯಾಕ್ಸ್ 4(R) ನೊಂದಣಿ ಸಂ:ಎಪಿ–02–ಎಹೆಚ್–3226 ರ ವಾಹನ ಹೊರತುಪಡಿಸಿ ಪ್ರಕರಣ ತನಿಖೆ ಕಾಯ್ದರಿಸಿ 159.280 ಲೀ. ಸೇಂದಿಯನ್ನು ದಿನಾಂಕ;12/04/2012 ರಂದು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಮಾದರಿ ಹೊರತುಪಡಿಸಿ ಉಳಿದ ಸೇಂದಿಯನ್ನು ನಿಯಮಾನುಸಾರ ನಾಶಪಡಿಸಲು ಪ್ರಾಧಿಕಾರದಿಂದ ಆದೇಶಿಸಲಾಗಿತ್ತು.

ಪ್ರಕರಣದಲ್ಲಿನ ಆರೋಪಿಗೆ ಈ ಪ್ರಾಧಿಕಾರದಿಂದ ದಿನಾಂಕ:14/12/2011 ರಂದು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43(ಬಿ) ರೀತ್ಯಾ ಕಾರಣ ಕೇಳಿ ನೋಟೀಸ್‌ನ್ನು ಅರ್.ಪಿ.ಎ.ಡಿ ಮೂಲಕ ರವಾನಿಸಿದ್ದು ನೋಟೀಸ್ ಸದರಿಯವರಿಗೆ ಜಾರಿಯಾಗಿ ಸ್ವೀಕೃತಿ ಬಂದಿರುತ್ತದೆ.

ಇದೇ ನೋಟೀಸ್‌ನ್ನು ಅಬಕಾರಿ ನಿರೀಕ್ಷಕರು ಸಹ ಆರೋಪಿಗೆ ಜಾರಿ ಮಾಡಿ ಸ್ವೀಕೃತಿಯನ್ನು ಪಡೆದು ಸಲ್ಲಿಸಿರುತ್ತಾರೆ. ನಂತರ ಜಪ್ತು ಮಾಡಿರುವ ಟಿವಿಎಸ್ ಮ್ಯಾಕ್ಸ್ 4(R) ನೊಂದಣಿ ಸಂ: ಎಪಿ–02–ಎಹೆಚ್–3226 ರ ವಾಹನವು ಜಪ್ತಾಗಿ ಸುಮಾರು 6 ತಿಂಗಳು ಕಳೆದರೂ ವಲಯ ಕಛೇರಿಗೆ ವಾಹನದ ಬಗ್ಗೆ ಹಕ್ಕು ಚಲಾಯಿಸಿ ಮೂಲ ದಾಖಲಾತಿಗಳೊಂದಿಗೆ ಯಾರೂ ಹಾಜರಾಗಿರುವುದಿಲ್ಲ. ಆದಕಾರಣ ವಾಹನವನ್ನು ಹೀಗೆ ಉಳಿಸಿಕೊಂಡಲ್ಲಿ ಅದರ ಮೌಲ್ಯ ಕಡಿಮೆಯಾಗಿ ಸರ್ಕಾರದ ರಾಜಸ್ವಕ್ಕೆ ದಕ್ಕೆಯಾಗುತ್ತದೆ. ಆದಕಾರಣ ವಾರಸುದಾರರು ಬಾರದೇ ಇರುವುದರಿಂದ ಸದರಿ ದ್ವಿಚಕ್ರ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ದಿನಾಂಕ:24/05/2012 ರಂದು ಶಿಫಾರಸ್ಸು ಮಾಡಿರುತ್ತಾರೆ.

ದಿನಾಂಕ: 25/05/2012 ರಂದು ಪ್ರಕರಣವನ್ನು ಪ್ರಾಧಿಕಾರದಲ್ಲಿ ವಿಚಾರಣೆಗೆ ತೆಗೆದುಕೊಳ್ಳಲಾಗಿ ವಾಹನ ಮಾಲೀಕತ್ವ ಹೊಂದಿರುವವರು ಈ ಪ್ರಾಧಿಕಾರದ ಮುಂದೆ ಇಲ್ಲಿಯತನಕ ಯಾರೂ ಹಾಜರಾಗಿರುವುದಿಲ್ಲ. ಪ್ರಕರಣದದಾಖಲೆಗಳಾದ ಪ್ರಥಮ ಮಾಹಿತಿ ವರದಿ,ಪಿಎಫ್, ಸ್ಥಳ ಮಹಜರ್‌ನ್ನು ಪರಿಶೀಲಿಸಲಾಗಿ ಆರಕ್ಷಕ ನಿರೀಕ್ಷಕರು, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ, ಚಿಕ್ಕಬಳ್ಳಾಪುರ ಇವರು ದಿನಾಂಕ:05/02/2012ರಂದು ಗೌರಿಬಿದನೂರು ತಾಲ್ಲೂಕು ಜಗರೆಡ್ಡಿಹಳ್ಳಿ–ಮೇಳ್ಯ ರಸ್ತೆಯಲ್ಲಿ ರಸ್ತೆಯಲ್ಲಿ ರಸ್ತೆಕಾವಲು ಮಾಡುತ್ತಿದ್ದಾಗ ಟಿವಿಎಸ್ ಮ್ಯಾಕ್ಸ್ 4(R) ನೊಂದಣಿ ಸಂ: ಎಪಿ–02–ಎಹೆಚ್–3226 ರ ದ್ವಿಚಕ್ರ ವಾಹನದಲ್ಲಿ 160. ಸೇಂದಿಯನ್ನು ಹೊಂದಿ ಅಕ್ರಮವಾಗಿ ಸಾಗಾಣಿಕೆ ಮಾಡುವ ಸಮಯದಲ್ಲಿ ಜಪ್ತುಪಡಿಸಿರುವುದು ಹಾಗೂ ರಾಸಾಯನಿಕ ತಜ್ಞರ ವರದಿಯನ್ವಯ ಜಪ್ತುಪಡಿಸಿರುವ ಸೇಂದಿಯಲ್ಲಿ ಈಥೈಲ್ ಆಲ್ಕೋಹಾಲ್ ಮತ್ತು ಕ್ಲೋರೈಡ್ ಹೈಡ್ರೇಟ್ ಅಂಶ ಕಂಡು ಬಂದಿರುವುದರಿಂದ ಈ ವಾಹನವನ್ನು ಅಬಕಾರಿ ವಸ್ತುಗಳ ಅಕ್ರಮ ಸಾಗಾಣಿಕೆಗೆ ಉಪಯೋಗಿಸಿರುವುದು ಸಾಬೀತಾಗಿರುತ್ತದೆ ಆದುದರಿಂದ ಈ ಕೆಳಗಿನಂತೆ ಆದೇಶ.

**ಆದೇಶ**

ಎಸ್. ಚಂದ್ರಶೇಖರ ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು, ಚಿಕ್ಕಬಳ್ಳಾಪುರ ಜಿಲ್ಲೆ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಕಲಂ 43(ಬಿ) ಅಡಿ ಕ್ರಮ ಜರುಗಿಸಲಾಗಿದ್ದು, ಆರಕ್ಷಕ ನಿರೀಕ್ಷಕರು, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ, ಚಿಕ್ಕಬಳ್ಳಾಪುರ ರವರ ದಿನಾಂಕ:05/02/2012 ರ ಪ್ರ.ಮಾ.ವ.ಸಂಖ್ಯೆ 91/2011 ರಲ್ಲಿ ಜಪ್ತುಪಡಿಸಿರುವ ಟಿವಿಎಸ್ ಮ್ಯಾಕ್ಸ್ 4(R) ನೊಂದಣಿ ಸಂ: ಎಪಿ–02–ಎಹೆಚ್–3226 ರ ದ್ವಿಚಕ್ರ ವಾಹನವನ್ನು ವಾರಸ್ಸುದಾರರಿಲ್ಲದ ವಾಹನವೆಂದು ಪರಿಗಣಿಸಿ ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಸಿ) ಅಡಿಯಲ್ಲಿ ಕರ್ನಾಟಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ವಾಹನಕ್ಕೆ ಸಂಬಂಧಿಸಿದಂತೆ ಈ ಆದೇಶದ ವಿರುದ್ದ ಮೇಲ್ಮನವಿ ಸಲ್ಲಿಸುವುದಾದಲ್ಲಿ ಈ ಆದೇಶ ಹೊರಡಿಸಿದ ದಿನಾಂಕದಿಂದ 30 ದಿವಸಗಳೊಳಗೆ ಸಲ್ಲಿಸಬಹುದಾಗಿದೆ. ತಪ್ಪಿದ್ದಲ್ಲಿ ಇದೇ ಅಂತಿಮ ಆದೇಶವಾಗಿ ಊರ್ಜಿತಗೊಳ್ಳುತ್ತದೆ.

ಈ ಆದೇಶವನ್ನು ದಿನಾಂಕ:25/05/2012 ರಂದು ಈ ಪ್ರಾಧಿಕಾರದ ಮೊಹರಿನೊಂದಿಗೆ ಹೊರಡಿಸಿರುತ್ತೇನೆ. ಮೇಲ್ಮನವಿ ಅವಧಿ ಮುಗಿದ ನಂತರ ಕಾನೂನು ರೀತ್ಯಾ ಮೇಲ್ಕಂಡ ವಾಹನವನ್ನು ವಿಲೇವಾರಿ ಮಾಡಲು ಆದೇಶಿಸಿದೆ.

**ಎನ್. ಚಂದ್ರಶೇಖರ,**
ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪಆಯುಕ್ತರು,
**ಪಿ.ಆರ್. 798** ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ.

**ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು, ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ. ಇವರ ನ್ಯಾಯಾಲಯದಲ್ಲಿ**

**ಪ್ರಕರಣ ಸಂ: ಇಎಕ್ಸ್‌ಇ/ಚಿಪುರ/ಡಿಟಿಸಿಆರ್/391/2011–12, ದಿನಾಂಕ: 25/05/2012**

**ಉಪಸ್ಥಿತರು:– ಎನ್. ಚಂದ್ರಶೇಖರ, ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು, ಚಿಕ್ಕಬಳ್ಳಾಪುರ ಜಿಲ್ಲೆ.**

| **ಪಿರ್ಯಾದುದಾರರು:** | **ವಿರುದ್ಧ** | **ಆರೋಪಿ:** |
|---|---|---|
| ಅಬಕಾರಿ ನಿರೀಕ್ಷಕರು,<br>ಚಿಕ್ಕಬಳ್ಳಾಪುರ ಉಪ ವಿಭಾಗ, ಚಿಕ್ಕಬಳ್ಳಾಪುರ. | | – ಇಲ್ಲಾ – |

**ಪ್ರಕರಣದ ಮುಖ್ಯಾಂಶಗಳು:**

ಅಬಕಾರಿ ಉಪ ಅಧೀಕ್ಷಕರು, ಚಿಕ್ಕಬಳ್ಳಾಪುರ ಉಪ ವಿಭಾಗ ರವರ ಮಾರ್ಗದರ್ಶನದಂತೆ ದಿನಾಂಕ:08/03/2012 ರಂದು ಸಾಯಂಕಾಲ 7.15 ಗಂಟೆ ಸಮಯದಲ್ಲಿ ಇದೇ ಉಪ ವಿಭಾಗದ ಅಬಕಾರಿ ನಿರೀಕ್ಷಕರು ಮತ್ತು ಸಿಬ್ಬಂದಿ ಇವರುಗಳು ಗೌರಿಬಿದನೂರು ತಾಲ್ಲೂಕು ನಗರಗೆರೆ ಬಸ್ ನಿಲ್ದಾಣದ ಬಳಿ ಇದ್ದ ವ್ಯಕ್ತಿಗಳಿಗೆ ಬಂದ ಬಾತ್ಮಿಯನ್ನು ತಿಳಿಸಿ ಅವರುಗಳು ಪಂಚರಾಗಲು ಒಪ್ಪಿಕೊಂಡ ನಂತರ ಸರ್ಕಾರಿ ವಾಹನ ನೊಂದಣಿ ಸಂ:ಕೆಎ–01 ಜಿ–3642 ರ ವಾಹನದಲ್ಲಿ ನಗರಗೆರೆ– ವಾಟದಹೊಸಹಳ್ಳಿ ರಸ್ತೆಯಲ್ಲಿರುವ ನಗರಗೆರೆ ಗ್ರಾಮದ ಸಮೀಪ (ಹತ್ತಿರ) ದಲ್ಲಿ ಇರುವ ಶನಿ ಮಹಾತ್ಮ ದೇವಸ್ಥಾನದ ಹತ್ತಿರದಲ್ಲಿ ರಸ್ತೆಕಾವಲು ಕಾಯುತ್ತಿದ್ದಾಗ ವಾಟದಹೊಸಹಳ್ಳಿ ಕಡೆಯಿಂದ ನಗರಗೆರೆ ಕಡೆಗೆ ಒಂದು ದ್ವಿಚಕ್ರ ವಾಹನ ಬರುತ್ತಿರುವುದು ಕಂಡು ಬಂದಿತು. ಸರ್ಕಾರಿ ವಾಹನವನ್ನು ನೋಡಿದ ದ್ವಿಚಕ್ರ ಸವಾರನು ವಾಹನವನ್ನು ಅಲ್ಲಿಯೇ ಬಿಟ್ಟು ಪೊದೆಗಳಲ್ಲಿ ಓಡಿ ಹೋದನು ಸಿಬ್ಬಂದಿಯವರು ಅನುಮಾನಗೊಂಡು ಆತನನ್ನು ಹಿಡಿಯಲು ಪ್ರಯತ್ನಿಸಿದರಾದರೂ ಕತ್ತಲಲ್ಲಿ ಆತನು ತಪ್ಪಿಸಿಕೊಂಡಿದ್ದು, ನಂತರ ವಾಹನ ಇದ್ದ ಸ್ಥಳಕ್ಕೆ ಹೋಗಿ ದ್ವಿಚಕ್ರ ವಾಹನವನ್ನು ಪಂಚರ ಸಮಕ್ಷಮ ಪರಿಶೀಲಿಸಿದಾಗ ವಾಹನದ ಸೈಡ್ ಬ್ಯಾಗ್‌ನಲ್ಲಿ ಎರಡು ಲೀಟರ್ ಸಾಮರ್ಥ್ಯದ ಎರಡು ಪ್ಲಾಸ್ಟಿಕ್ ಬಾಟಲುಗಳಲ್ಲಿ ದ್ರಾವಣವಿದ್ದು, ಘಾಟು ವಾಸನೆ ಬರುತ್ತಿತ್ತು. ಅದು ಸೇಂದಿ ಎಂದು ಖಚಿತಪಡಿಸಿಕೊಳ್ಳಲಾಯಿತು. ಒಂದೊಂದು ಬಾಟಲ್‌ನಲ್ಲಿ ಎರಡು ಲೀಟರ್‌ನಂತೆ ಒಟ್ಟು 4 ಲೀ. ಸೇಂದಿಯಿತ್ತು. ನಂತರ ಪ್ರತಿಯೊಂದು ಬಾಟಲ್‌ನಿಂದ 500 ಎಂ.ಎಲ್. ನಂತೆ 4 ಪ್ಲಾಸ್ಟಿಕ್ ಬಾಟಲುಗಳಲ್ಲಿ ಸೇಂದಿಯನ್ನು ರಸಾಯನಿಕ ಪರೀಕ್ಷೆಗಾಗಿ ಮಾದರಿ ತೆಗೆದು, ಮಾದರಿ ಬಾಟಲುಗಳ ಬಾಯಿಗೆ ಮುಚ್ಚಳ ಹಾಕಿ ಬಿಳಿ ಬಟ್ಟೆ ಸುತ್ತಿ ದಾರದಿಂದ ಕಟ್ಟಿ ಇಲಾಖೆಯ ಸೀಲು ನಂ:44 ರಿಂದ ಮೊಹರು ಮಾಡಿ ನಂತರ ಚೀಟಿಗಳ ಮೇಲೆ ಪಂಚರ ಸಹಿ ಪಡೆದು ಮಾದರಿ ಬಾಟಲುಗಳಿಗೆ ಅಂಟಿಸಲಾಯಿತು. ಮಾದರಿ ಸೀಲಿನ ನಮೂನೆ ಸಿದ್ಧಪಡಿಸಿ ಅದಕ್ಕೆ ಪಂಚರ ಹಾಗೂ ತನಿಖಾಧಿಕಾರಿಯವರು ಸಹಿ ಮಾಡಿದ ನಂತರ ದ್ವಿಚಕ್ರ ವಾಹನವನ್ನು ಮತ್ತೊಮ್ಮೆ ಪರಿಶೀಲಿಸಲಾಗಿ ಅದು ಡಿಸ್ಕವರಿ ಸಿಸಿ 135 ಆಗಿದ್ದು, ಇದರ ನೊಂದಣಿ ಸಂ:ಕೆಎ–43 ಜೆ–693 ಆಗಿರುತ್ತದೆ. ನಂತರ ದ್ವಿಚಕ್ರ ವಾಹನ ಮತ್ತು ಸೇಂದಿಯನ್ನು ಅಮಾನತ್ತುಪಡಿಸಿಕೊಂಡು ಈ ಕೃತ್ಯವು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 11, 32 & 38(ಎ) ರಂತೆ ಶಿಕ್ಷಾರ್ಹ ಅಪರಾಧವಾಗಿರುವುದರಿಂದ ಈ ಬಗ್ಗೆ ತಕ್ಷೀರು ಸಂ:39/2011–12, ದಿನಾಂಕ:08/03/2012 ರಲ್ಲಿ ಮೊಕದ್ದಮೆ ದಾಖಲಿಸಿಕೊಂಡು ಪ್ರಥಮ ಮಾಹಿತಿ ವರದಿಯನ್ನು ನ್ಯಾಯಾಲಯಕ್ಕೆ ಹಾಜರುಪಡಿಸಿ, ತದನಂತರ ಪ್ರ.ಮಾ.ವ. ಮಹಜರ್ ಪ್ರತಿಯೊಂದಿಗೆ ಹಾಗೂ ಪಿ.ಎಫ್‌ನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿ ಸೇಂದಿ ಮತ್ತು ವಾಹನವನ್ನು ಅಬಕಾರಿ ನಿರೀಕ್ಷಕರು, ಗೌರಿಬಿದನೂರು ವಲಯ ಇವರಿಗೆ ಹಸ್ತಾಂತರಿಸಲು ಅನುಮತಿ ನೀಡಬೇಕೆಂದು ಕೋರಿರುತ್ತಾರೆ.

ವಶಪಡಿಸಿಕೊಂಡಿರುವ ವಸ್ತುಗಳ ಪಟ್ಟಿ ನಂ:058/2012 ರಲ್ಲಿ ವಾಹನ ಮತ್ತು ಸೇಂದಿಯನ್ನು ಅಬಕಾರಿ ನಿರೀಕ್ಷಕರು, ಗೌರಿಬಿದನೂರು ವಲಯ ಇವರಿಗೆ ಹಸ್ತಾಂತರಿಸಲು ಈ ಪ್ರಾಧಿಕಾರದಿಂದ ಅನುಮತಿ ನೀಡಲಾಗಿದೆ.

ಅಬಕಾರಿ ನಿರೀಕ್ಷಕರು, ಗೌರಿಬಿದನೂರು ವಲಯ ರವರು ತನಿಖೆಯನ್ನು ಮುಂದುವರೆಸಿ ಜಪ್ತುಪಡಿಸಿದ ಸೇಂದಿಯಿಂದ ತೆಗೆಯಲಾದ ಮಾದರಿಯನ್ನು ರಾಸಾಯನಿಕ ವಿಶ್ಲೇಷಣೆಗಾಗಿ ಕೇಂದ್ರ ರಾಸಾಯನಿಕ ಪ್ರಯೋಗಾಲಯ, ಅಬಕಾರಿ ಇಲಾಖೆ, ಬೆಂಗಳೂರು ಇವರಿಗೆ ಸಲ್ಲಿಸಿದ್ದು, ತಜ್ಞರ ವರದಿ ಸಂ:ಸಿಸಿಎಲ್:2099/2012, ದಿನಾಂಕ:10/04/2012 ರ ಪತ್ರದಂತೆ ರಾಸಾಯನಿಕ ವಿಶ್ಲೇಷಣೆಗೆ ಕಳುಹಿಸಲಾದ ಮಾದರಿಯಲ್ಲಿ ಮದ್ಯಸಾರದ ಅಂಶ 3.13 & 3.28% ವಿ.ವಿ. ಇದ್ದು, ಇದರಲ್ಲಿ ಈಥೈಲ್ ಆಲ್ಕೋಹಾಲ್ ಮತ್ತು ಕ್ಲೋರಲ್ ಹೈಡ್ರೇಟ್ ಕಂಡುಬಂದಿದ್ದು, ಇದು ಮಾನವನ ಸೇವನೆಗೆ ಯೋಗ್ಯವಾಗಿರುತ್ತದೆ ಎಂದು ತಜ್ಞರು ಅಭಿಪ್ರಾಯ ನೀಡಿದ್ದು, ತಜ್ಞರ ವರದಿಯ ಪ್ರತಿಯನ್ನು ಅಬಕಾರಿ ನಿರೀಕ್ಷಕರು, ಗೌರಿಬಿದನೂರು ವಲಯ ರವರ ಪತ್ರ ದಿನಾಂಕ:20/04/2012 ರೊಂದಿಗೆ ಲಗತ್ತಿಸಿ ಈ ಮೊಕದ್ದಮೆಯಲ್ಲಿ ಜಪ್ತುಪಡಿಸಲಾದ 4 ಲೀ. ಸೇಂದಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ತನಿಖಾಧಿಕಾರಿಗಳು ವರದಿ ಸಲ್ಲಿಸಿದ್ದು, ಅದರಂತೆ ಡಿಸ್ಕವರಿ ಸಿಸಿ135 ರ ನೊಂದಣಿ ಸಂ:ಕೆಎ–43 ಜೆ–693 ರ ವಾಹನ ಹೊರತುಪಡಿಸಿ ಪ್ರಕರಣ ತನಿಖೆ

ಕಾಯ್ದರಿಸಿ 4 ಲೀ. ಸೇಂದಿಯನ್ನು ದಿನಾಂಕ:27/04/2012 ರಂದು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಮಾದರಿ ಹೊರತುಪಡಿಸಿ ಉಳಿದ ಸೇಂದಿಯನ್ನು ನಿಯಮಾನುಸಾರ ನಾಶಪಡಿಸಲು ಪ್ರಾಧಿಕಾರದಿಂದ ಆದೇಶಿಸಲಾಗಿತ್ತು.

ಅಬಕಾರಿ ನಿರೀಕ್ಷಕರು, ಗೌರಿಬಿದನೂರು ವಲಯ ರವರು ತನಿಖೆಯನ್ನು ಮುಂದುವರೆಸಿ ಪ್ರಕರಣದಲ್ಲಿ ಜಪ್ತು ಮಾಡಿರುವ ಡಿಸ್ಕವರಿ ಸಿಸಿ135 ರ ನೊಂದಣಿ ಸಂ:ಕೆಎ–43 ಜೆ–693 ರ ಮಾಲೀಕರ ಬಗ್ಗೆ ಸಂಬಂಧಿಸಿದ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಂದ 'ಬಿ' ರಿಜಿಸ್ಟರ್ ಎಕ್ಸ್‌ಟ್ರ್ಯಾಕ್ಟ್ ಪಡೆದು ಈ ಪ್ರಾಧಿಕಾರಕ್ಕೆ ಸಲ್ಲಿಸಿದ್ದು, ಸದರಿ 'ಬಿ' ರಿಜಿಸ್ಟರ್ ಎಕ್ಸ್‌ಟ್ರ್ಯಾಕ್ಟ್ ಪ್ರಕಾರ ನಾಗರಾಜ್ ಬಿನ್ ಲಕ್ಷ್ಮಯ್ಯ, ಕೊರಮರ ರಸ್ತೆ, ದೇವನಹಳ್ಳಿ ಟೌನ್, ಬೆಂಗಳೂರು ಗ್ರಾಮಾಂತರ ಜಿಲ್ಲೆ ಎಂದು ವರದಿಯ ಮೇರೆಗೆ ಸದರಿ ನೊಂದಣಿ ಮಾಲೀಕರಿಗೆ ಈ ಪ್ರಾಧಿಕಾರದಿಂದ ದಿನಾಂಕ:30/04/2012 ರಂದು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43(ಬಿ) ಪ್ರಕಾರ ಕಾರಣ ಕೇಳಿ ನೋಟೀಸ್‌ನ್ನು ಆರ್.ಪಿ.ಎ.ಡಿ. ಮೂಲಕ ರವಾನಿಸಿದ್ದು, ನೋಟೀಸ್ ಜಾರಿಯಾಗದೇ ಈ ಕಛೇರಿಗೆ ವಾಪಸ್ಸು ಬಂದಿರುತ್ತದೆ. ಅಬಕಾರಿ ನಿರೀಕ್ಷಕರು ದಿನಾಂಕ:04/05/2012 ರಂದು ನೋಟೀಸ್‌ನ್ನು ವಾಹನ ಮಾಲೀಕರಿಗೆ ಖುದ್ದು ಜಾರಿ ಮಾಡಿ ಸ್ವೀಕೃತಿಯನ್ನು ಪಡೆದು ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ಪ್ರಕರಣದಲ್ಲಿ ಜಪ್ತುಪಡಿಸಿರುವ ವಾಹನದ ಮೂಲ ದಾಖಲಾತಿಗಳೊಂದಿಗೆ ಈ ಕಛೇರಿಗೆ ವಾಹನ ಮಾಲೀಕರಾಗಲೀ / ಆರೋಪಿಯಾಗಲೀ ಇಲ್ಲಿಯವರೆವಿಗೂ ಮುಂದೆ ಬಾರದೇ ಇರುವುದರಿಂದ ಈ ವಾಹನಕ್ಕೆ ವಾರಸ್ಸುದಾರರಿಲ್ಲದ ವಾಹನವೆಂದು ಪರಿಗಣಿಸಿ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43(ಸಿ) ಅಡಿಯಲ್ಲಿ ಡಿಸ್ಕವರಿ ಸಿಸಿ135 ರ ನೊಂದಣಿ ಸಂ:ಕೆಎ–43 ಜೆ–693 ರ ದ್ವಿಚಕ್ರ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ದಿನಾಂಕ:23/05/2012 ರ ಪತ್ರದಲ್ಲಿ ಅಬಕಾರಿ ನಿರೀಕ್ಷಕರು, ಗೌರಿಬಿದನೂರು ವಲಯ ರವರು ಶಿಫಾರಸ್ಸು ಮಾಡಿರುತ್ತಾರೆ.

ದಿನಾಂಕ:25/05/2012 ರಂದು ಪ್ರಕರಣವನ್ನು ಪ್ರಾಧಿಕಾರದಲ್ಲಿ ವಿಚಾರಣೆಗೆ ತೆಗೆದುಕೊಳ್ಳಲಾಗಿ ವಾಹನ ಮಾಲೀಕತ್ವ ಹೊಂದಿರುವವರು ಈ ಪ್ರಾಧಿಕಾರದ ಮುಂದೆ ಇಲ್ಲಿಯತನಕ ಯಾರೂ ಹಾಜರಾಗಿರುವುದಿಲ್ಲ. ಪ್ರಕರಣದ ಪ್ರಥಮ ಮಾಹಿತಿ ವರದಿ, ಮಹಜರ್‌ನ್ನು ಇತರೆ ದಾಖಲೆಗಳನ್ನು ಪರಿಶೀಲಿಸಲಾಗಿ ಅಬಕಾರಿ ನಿರೀಕ್ಷಕರು, ಚಿಕ್ಕಬಳ್ಳಾಪುರ ಉಪ ವಿಭಾಗ ಇವರು ದಿನಾಂಕ:08/03/2012 ರಂದು ಗೌರಿಬಿದನೂರು ತಾಲ್ಲೂಕು ನಗರಗೆರೆ–ವಾಟದಹೊಸಹಳ್ಳಿ ರಸ್ತೆಯಲ್ಲಿರುವ ನಗರಗೆರೆ ಗ್ರಾಮದ ಸಮೀಪ (ಹತ್ತಿರ) ದಲ್ಲಿ ಇರುವ ಶನಿ ಮಹಾತ್ಮ ದೇವಸ್ಥಾನದ ಹತ್ತಿರದಲ್ಲಿ ರಸ್ತೆಕಾವಲು ಮಾಡುತ್ತಿದ್ದಾಗ ಡಿಸ್ಕವರಿ ಸಿಸಿ135 ರ ನೊಂದಣಿ ಸಂ:ಕೆಎ–43 ಜೆ–693 ರ ದ್ವಿಚಕ್ರ ವಾಹನದಲ್ಲಿ 4 ಲೀ. ಸೇಂದಿಯನ್ನು ಹೊಂದಿ ಅಕ್ರಮವಾಗಿ ಸಾಗಾಣಿಕೆ ಮಾಡುವ ಸಮಯದಲ್ಲಿ ಜಪ್ತುಪಡಿಸಿರುವುದು ಹಾಗೂ ರಾಸಾಯನಿಕ ತಜ್ಞರ ವರದಿಯನ್ವಯ ಸೇಂದಿಯಲ್ಲಿ "ಈಥೈಲ್ ಆಲ್ಕೋಹಾಲ್" ಅಂಶ ಕಂಡು ಬಂದಿರುವುದರಿಂದ ಈ ವಾಹನವನ್ನು ಅಬಕಾರಿ ವಸ್ತುಗಳ ಅಕ್ರಮ ಸಾಗಾಣಿಕೆಗೆ ಉಪಯೋಗಿಸಿರುವುದು ಸಾಬೀತಾಗಿರುತ್ತದೆ ಆದುದರಿಂದ ಈ ಕೆಳಗಿನಂತೆ ಆದೇಶ.

**ಆದೇಶ**

ಎನ್. ಚಂದ್ರಶೇಖರ, ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು, ಚಿಕ್ಕಬಳ್ಳಾಪುರ ಜಿಲ್ಲೆ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಕಲಂ 43(ಬಿ) ಅಡಿ ಕ್ರಮ ಜರುಗಿಸಲಾಗಿದ್ದು, ಅಬಕಾರಿ ನಿರೀಕ್ಷಕರು, ಚಿಕ್ಕಬಳ್ಳಾಪುರ ಉಪ, ಚಿಕ್ಕಬಳ್ಳಾಪುರ ರವರ ದಿನಾಂಕ:08/03/2012 ರ ಪ್ರ.ಮಾ.ವ.ಸಂ:39/2011–12 ರಲ್ಲಿ ಜಪ್ತುಪಡಿಸಿರುವ ಡಿಸ್ಕವರಿ ಸಿಸಿ135 ರ ನೊಂದಣಿ ಸಂ:ಕೆಎ–43 ಜೆ–693 ರ ಇಂಜಿನ್ ನಂ:ಜೆಎನ್‌ಜಿಬಿಪಿಎಫ್02011, ಚಾಸೀಸ್ ನಂ:ಎಂಡಿ2ಡಿಎಸ್‌ಜೆಎನ್‌ಜೆಡ್‌ಜೆಡ್‌ಪಿಸಿಎಫ್92578 ರ ದ್ವಿಚಕ್ರ ವಾಹನವನ್ನು ವಾರಸ್ಸುದಾರರಿಲ್ಲದ ವಾಹನವೆಂದು ಪರಿಗಣಿಸಿ ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಸಿ) ಅಡಿಯಲ್ಲಿ ಕರ್ನಾಟಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ವಾಹನಕ್ಕೆ ಸಂಬಂಧಿಸಿದಂತೆ ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸುವುದಾದಲ್ಲಿ ಈ ಆದೇಶ ಹೊರಡಿಸಿದ ದಿನಾಂಕದಿಂದ 30 ದಿವಸಗಳೊಳಗೆ ಸಲ್ಲಿಸಬಹುದಾಗಿದೆ. ತಪ್ಪಿದ್ದಲ್ಲಿ ಇದೇ ಅಂತಿಮ ಆದೇಶವಾಗಿ ಊರ್ಜಿತಗೊಳ್ಳುತ್ತದೆ.

ಈ ಆದೇಶವನ್ನು ದಿನಾಂಕ:25/05/2012 ರಂದು ಈ ಪ್ರಾಧಿಕಾರದ ಮೊಹರಿನೊಂದಿಗೆ ಹೊರಡಿಸಿರುತ್ತೇನೆ. ಮೇಲ್ಮನವಿ ಅವಧಿ ಮುಗಿದ ನಂತರ ಕಾನೂನು ರೀತ್ಯಾ ಮೇಲ್ಕಂಡ ವಾಹನವನ್ನು ವಿಲೇವಾರಿ ಮಾಡಲು ಆದೇಶಿಸಿದೆ.

**ಎನ್. ಚಂದ್ರಶೇಖರ,**

ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪಆಯುಕ್ತರು,

**ಪಿ.ಆರ್. 797** ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ.

## ಶಿಕ್ಷಣ ಸಚಿವಾಲಯ

**ಸಂಖ್ಯೆ: ಇಡಿ 618 ಎಲ್ ಐಬಿ 2011, ಬೆಂಗಳೂರು, ದಿನಾಂಕ:11.05.2012**

## ಅಧಿಸೂಚನೆ

**ವಿಷಯ** : ಸಾರ್ವಜನಿಕ ಗ್ರಂಥಾಲಯ ಇಲಾಖೆಯ ಗ್ರೂಪ್ ಎ ಶ್ರೇಣಿಯ ಉಪನಿರ್ದೇಶಕರು ಹಾಗೂ ತತ್ಸಮಾನ ವೃಂದದ ಅಧಿಕಾರಿಗಳ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ದಿನಾಂಕ:30.09.2011 ರಲ್ಲಿದ್ದಂತೆ ಪ್ರಕಟಿಸುವ ಕುರಿತು.

ಸಾರ್ವಜನಿಕ ಗ್ರಂಥಾಲಯ ಇಲಾಖೆಯ ಗ್ರೂಪ್ ಎ ಶ್ರೇಣಿಯ ಉಪನಿರ್ದೇಶಕರು ಹಾಗೂ ತತ್ಸಮಾನ ವೃಂದದ ಅಧಿಕಾರಿಗಳ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ದಿನಾಂಕ: 30.09.2011 ರಲ್ಲಿರುವಂತೆ ತಯಾರಿಸಿ ಕೆಳಕಂಡಂತೆ ಪ್ರಕಟಿಸಲಾಗಿದೆ.

ಈ ತಾತ್ಕಾಲಿಕ ಜೇಷ್ಠತಾ ಪಟ್ಟಿಗೆ ಸಂಬಂಧಿಸಿದಂತೆ ಇದರಿಂದ ಬಾಧಿತರಾಗಬಹುದಾದಂತಹ ಅಧಿಕಾರಿಗಳು ಈ ಅಧಿಸೂಚನೆ ಹೊರಡಿಸಿದ ದಿನಾಂಕದಿಂದ 30 ದಿನಗಳೊಳಗಾಗಿ ತಮ್ಮ ಆಕ್ಷೇಪಣೆ / ಸಲಹೆ / ಸೂಚನೆಗಳಿದ್ದಲ್ಲಿ, ಅದನ್ನು ಸಮರ್ಥಿಸುವಂತಹ ದಾಖಲೆಗಳೊಂದಿಗೆ ಸಾರ್ವಜನಿಕ ಗ್ರಂಥಾಲಯ ಇಲಾಖೆಯ ನಿರ್ದೇಶಕರಿಗೆ ಸಲ್ಲಿಸಿ ಅದರ ಪ್ರತಿಯನ್ನು ಸರ್ಕಾರದ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ), ಕರ್ನಾಟಕ ಸರ್ಕಾರದ ಸಚಿವಾಲಯ, ಬಹುಮಹಡಿ ಕಟ್ಟಡ, 6ನೇ ಮಹಡಿ, ಬೆಂಗಳೂರು ಇವರಿಗೆ ಸಲ್ಲಿಸುವುದು. ಈ ನಿಗಧಿತ ಅವಧಿ ಮುಗಿದ ನಂತರ ಬಂದ ಆಕ್ಷೇಪಣೆಗಳು/ ಸಲಹೆಗಳನ್ನು ಪರಿಗಣಿಸಲಾಗುವುದಿಲ್ಲ.

| ಕ್ರ.ಸ | ಹೆಸರು<br>ಶ್ರೀ : ಶ್ರೀಮತಿ | ಜೇಷ್ಠತಾ ಕ್ರಮ ಸಂಖ್ಯೆ | ಮೀಸಲಾತಿ ವರ್ಗ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಹೊಂದಿದ ದಿನಾಂಕ | ನೇಮಕಾತಿಗೆ ಜೇಷ್ಠತೆಗೆ ನೈಜವಾದ ಅರ್ಹತಾ ದಿನಾಂಕ | ಷರಾ |
|---|---|---|---|---|---|---|---|---|
| 1 | 2 | | 4 | 5 | 6 | 7 | 8 | |
| 1. | ಕೆ.ಜಿ.ವೆಂಕಟೇಶ್, ನಗರ ಜಿಲ್ಲಾ ಕೇಂದ್ರ ಗ್ರಂಥಾಲಯ, ಬೆಂಗಳೂರು | 1 | ಸಾಮಾನ್ಯ | 05–08–1952 | 12–07–1979 | ನೇರ ನೇಮಕಾತಿ | 12–07–79 | ನಿರ್ದೇಶಕರ ಹುದ್ದೆಗೆ ದಿನಾಂಕ:21.10.2011 ರಂದು ನೇಮಕ ಹೊಂದಿರುತ್ತಾರೆ. |
| 2. | ಆರ್.ಕೆ.ಬಡಿಗಣ್ಣವರ, ರಾಜ್ಯ ಕೇಂದ್ರ ಗ್ರಂಥಾಲಯ, ಬೆಂಗಳೂರು | 2 | ಸಾಮಾನ್ಯ | 06–10–1952 | 27–07–1979 | ನೇರ ನೇಮಕಾತಿ | 12–11–1986 | 26.9.2005 ರಂದು ಉಪನಿರ್ದೇಶಕರ ಹುದ್ದೆಗೆ ಬಡ್ತಿಹೊಂದಿರುತ್ತಾರೆ |
| 3. | ಬಿ.ಎಸ್.ಧವನ್, ಜಿಲ್ಲಾ ಕೇಂದ್ರ ಗ್ರಂಥಾಲಯ, ಕಾರವಾರ | 3 | ಸಾಮಾನ್ಯ | 16–03–1954 | 18–07–1979 | 9–4–97 | 09–04–1997 | 30.8.2006 ರಂದು ಉಪನಿರ್ದೇಶಕರ ಹುದ್ದೆಗೆ ಬಡ್ತಿ ಹೊಂದಿರುತ್ತಾರೆ |
| 4. | ಎಂ.ಎಂ.ಬಡ್ನಿ, ಜಿಲ್ಲಾ ಕೇಂದ್ರ ಗ್ರಂಥಾಲಯ, ಶಿವಮೊಗ್ಗ | 4 | ಸಾಮಾನ್ಯ | 01–06–1954 | 17–07–1979 | 4–4–97 | 04–04–1997 | 26.9..2005ರಂದು ಉಪನಿರ್ದೇಶಕರ ಹುದ್ದೆಗೆ ಬಡ್ತಿ ಹೊಂದಿರುತ್ತಾರೆ |
| | ಎಸ್.ಟಿ.ಇಂಗಳೆ, ನಗರ ಕೇಂದ್ರ ಗ್ರಂಥಾಲಯ, ಧಾರವಾಡ | 5 | ಸಾಮಾನ್ಯ 2ಎ | 26–05–1952 | 19–07–1979 | 10–4–97 | 10–04–1997 | 30.8.2006 ರಂದು ಉಪನಿರ್ದೇಶಕರ ಹುದ್ದೆಗೆ ಬಡ್ತಿ ಹೊಂದಿರುತ್ತಾರೆ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಬಿ.ಪಟಗಾರ್,**

ಸರ್ಕಾರದ ಅಧೀನ ಕಾರ್ಯದರ್ಶಿ

ಶಿಕ್ಷಣ ಇಲಾಖೆ (ಸಾಮಾನ್ಯ)

**ಶಿಕ್ಷಣ ಸಚಿವಾಲಯ**

**ಸಂಖ್ಯೆ: ಇಡಿ 618 ಎಲ್ ಐಬಿ 2011, ಬೆಂಗಳೂರು, ದಿನಾಂಕ:11.05.2012**

**ಅಧಿಸೂಚನೆ**

**ವಿಷಯ** : ಸಾರ್ವಜನಿಕ ಗ್ರಂಥಾಲಯ ಇಲಾಖೆಯ ಗ್ರೂಪ್ ಬಿ ಶ್ರೇಣಿಯ ಮುಖ್ಯಗ್ರಂಥಾಲಯಾಧಿಕಾರಿಗಳ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ದಿನಾಂಕ:30.09.2011 ರಲ್ಲಿದ್ದಂತೆ ಪ್ರಕಟಿಸುವ ಕುರಿತು.

ಸಾರ್ವಜನಿಕ ಗ್ರಂಥಾಲಯ ಇಲಾಖೆಯ ಗ್ರೂಪ್ ಬಿ ಶ್ರೇಣಿಯ ಮುಖ್ಯ ಗ್ರಂಥಾಲಯಾಧಿಕಾರಿಗಳ ಹಾಗೂ ತತ್ಸಮಾನ ವೃಂದದ ಅಧಿಕಾರಿಗಳ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ದಿನಾಂಕ: 30.09.2011 ರಲ್ಲಿರುವಂತೆ ತಯಾರಿಸಿ ಕೆಳಕಂಡಂತೆ ಪ್ರಕಟಿಸಲಾಗಿದೆ.

ಈ ತಾತ್ಕಾಲಿಕ ಜೇಷ್ಠತಾ ಪಟ್ಟಿಗೆ ಸಂಬಂಧಿಸಿದಂತೆ ಇದರಿಂದ ಬಾಧಿತರಾಗಬಹುದಾದಂತಹ ಅಧಿಕಾರಿಗಳು ಈ ಅಧಿಸೂಚನೆ ಹೊರಡಿಸಿದ ದಿನಾಂಕದಿಂದ 30 ದಿನಗಳೊಳಗಾಗಿ ತಮ್ಮ ಆಕ್ಷೇಪಣೆ / ಸಲಹೆ / ಸೂಚನೆಗಳಿದ್ದಲ್ಲಿ, ಅದನ್ನು ಸಮರ್ಥಿಸುವಂತಹ ದಾಖಲೆಗಳೊಂದಿಗೆ ಸಾರ್ವಜನಿಕ ಗ್ರಂಥಾಲಯ ಇಲಾಖೆಯ ನಿರ್ದೇಶಕರಿಗೆ ಸಲ್ಲಿಸಿ ಅದರ ಪ್ರತಿಯನ್ನು ಸರ್ಕಾರದ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ), ಬಹುಮಹಡಿ ಕಟ್ಟಡ, 6ನೇ ಮಹಡಿ, ಬೆಂಗಳೂರು ಇವರಿಗೆ ಸಲ್ಲಿಸುವುದು. ಈ ನಿಗಧಿತ ಅವಧಿ ಮುಗಿದ ನಂತರ ಬಂದ ಆಕ್ಷೇಪಣೆಗಳು/ ಸಲಹೆಗಳನ್ನು ಪರಿಗಣಿಸಲಾಗುವುದಿಲ್ಲ.

| ಕ್ರ.ಸಂ. | ಹೆಸರು<br>ಶ್ರೀಮತಿ/ಶ್ರೀ | ನೇರ ನೇಮಕಾತಿ ಮುಂಬಡ್ತಿ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಅರ್ಹತಾ ದಿನಾಂಕ | ಷರಾ |
|---|---|---|---|---|---|---|
| 1 | 2 | 3 | 4 | 5 | | 11 |
| 1. | ಸತೀಶಕುಮಾರ ಹೊಸಮನಿ, ನ.ಕೇ.ಗ್ರಂ. ಕೇಂದ್ರ ವಲಯ, ಬೆಂಗಳೂರು | ನೇರ ನೇಮಕಾತಿ | 01–06–69 | 06–09–04 | 06–09–04 | |
| 2. | ಸರಸ್ವತಿ ಎನ್., ಜಿ.ಕೇ.ಗ್ರಂ. ಚಿಕ್ಕಬಳ್ಳಾಪುರ | ನೇರ ನೇಮಕಾತಿ | 28–03–66 | 02–09–04 | 02–09–04 | |
| 3. | ಅನಿಲಕುಮಾರ ಕ್ಷೀರಸಾಗರ ಕೊಪ್ಪಳ | ನೇರ ನೇಮಕಾತಿ | 01–05–68 | 29–04–05 | 29–04–05 | |
| 4. | ದಿವಾಕರ, ಜಿ.ಕೇ.ಗ್ರಂ. ಉಡುಪಿ | ನೇರ ನೇಮಕಾತಿ | 04–01–71 | 02–05–05 | 02–05–05 | |
| 5. | ಮಂಜುನಾಥ ಬಿ ಜಿ.ಕೇ.ಗ್ರಂ. ಮೈಸೂರು | ನೇರ ನೇಮಕಾತಿ | 30–01–72 | 30–04–05 | 30–04–05 | |
| 6. | ರಾಘವೇಂದ್ರ ಕೆ.ವಿ. ನ.ಕೇ.ಗ್ರಂ. ಉಡುಪಿ | ನೇರ ನೇಮಕಾತಿ | 25–04–75 | 30–04–05 | 30–04–05 | |
| 7. | ಪೂರ್ಣಿಮಾ ಸಿ.ಎಸ್. ನ.ಕೇ.ಗ್ರಂ. ಕೇಂದ್ರ ವಲಯ, | ನೇರ ನೇಮಕಾತಿ | 28–06–71 | 28–04–05 | 28–04–05 | |
| 8. | ಹೆಚ್. ಚಂದ್ರಶೇಖರ್ ನ.ಕೇ.ಗ್ರಂ. ಉತ್ತರ ವಲಯ, ಬೆಂಗಳೂರು | ನೇರ ನೇಮಕಾತಿ | 28–03–67 | 02–05–05 | 02–05–05 | |
| 9. | ಎಸ್.ಜಿ.ಮೆಂಚ್, ಜಿ.ಕೇ.ಗ್ರಂ. ಧಾರವಾಡ | ಮುಂಬಡ್ತಿ | 25–7–55 | 24–8–79 | 24–8–79 | |
| 10. | ಎಸ್.ಎಂ.ಭೈರನಟ್ಟಿ, ನ.ಕೇ.ಗ್ರಂ. ಬೆಳಗಾಂ | ಮುಂಬಡ್ತಿ | 23–4–55 | 20–7–79 | 20–7–79 | |

| ಕ್ರ.ಸಂ. | ಹೆಸರು ಶ್ರೀಮತಿ/ಶ್ರೀ | ನೇರ ನೇಮಕಾತಿ ಮುಂಬಡ್ತಿ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಅರ್ಹತಾ ದಿನಾಂಕ | ಷರಾ |
|---|---|---|---|---|---|---|
| 1 | 2 | 3 | 4 | 5 | | 11 |
| 11. | ಎಸ್.ಎ. ಹಿರೇಮಠ ನ.ಕೇ.ಗ್ರಂ. ಬಳ್ಳಾರಿ. | ಮುಂಬಡ್ತಿ | 27–11–51 | 26–7–79 | 26–7–79 | |
| 12. | ವಿ.ಬಿ.ಭೂಮಣ್ಣವರ ಜಿಕೇಗ್ರಂ ಬೆಳಗಾವಿ | ಮುಂಬಡ್ತಿ | 1–6–54 | 14–8–79 | 14–8–79 | |
| 13. | ಆರ್.ಕೆ.ರಾಮೇಗೌಡ, ಜಿಕೇಗ್ರಂ,ಪಶ್ಚಿಮವಲಯ,ಬೆಂಗಳೂರು | ಮುಂಬಡ್ತಿ | 3–2–52 | 26–9–79 | 26–9–79 | |
| 14. | ಜಿ.ಸಿ.ನೇಕಾರ್ ಗ್ರಾ.ಜಿ.ಕೇ.ಗ್ರಾಂ, ಬೆಂಗಳೂರು | ಮುಂಬಡ್ತಿ | 1–4–54 | 21–8–79 | 21–8–79 | |
| 15. | ಪುಷ್ಪಲತಾ..ಎಂ. ರಟ್ಟಿಹಳ್ಳಿ, ನ.ಕೇ.ಗ್ರಂ. ಕೇಂದ್ರ ವಲಯ, ಬೆಂಗಳೂರು | ಮುಂಬಡ್ತಿ | 2–12–57 | 20–7–81 | 20–7–81 | |
| 16. | ಡಾ:.ಎಂ.ಎನ್.ರಟ್ಟಿಹಳ್ಳಿ ನಿರ್ದೇಶಕರ ಕಚೇರಿ, ಬೆಂಗಳೂರು. | ಮುಂಬಡ್ತಿ | 1–4–53 | 23–7–81 | 23–7–81 | |
| 17. | ಕೆ.ವೆಂಕಟೇಶ್, ನ.ಕೇ.ಗ್ರಂ. ಪ.ವ., ಬೆಂಗಳೂರು | ಮುಂಬಡ್ತಿ | 4–3–54 | 21–7–79 | 21–7–79 | |
| 18. | ಎಸ್.ಎಂ.ಜೋಗಿ, ನಕೇಗ್ರಂ ಪೂ.ವಲಯ, ಬೆಂಗಳೂರು | ಮುಂಬಡ್ತಿ | 15–4–56 | 5–10–81 | 5–10–81 | |
| 19. | ಎಂ.ಕೆಂಪಯ್ಯ, ನ.ಕೇ.ಗ್ರಂ. ಮೈಸೂರು | ಮುಂಬಡ್ತಿ | 10–11–51 | 16–7–79 | 16–7–79 | |
| 20. | ಹೆಚ್.ಎಸ್.ಗಡ್ಡಿ, ನಕೇಗ್ರಂ, ಪೂ.ವ. ಆರ್.ಟಿ.ನಗರ ಬೆಂಗಳೂರು | ಮುಂಬಡ್ತಿ | 1–6–54 | 23–10–81 | 23–10–81 | |
| 21. | ಬಿ.ಆರ್. ಹಿರೇಮಠ, ನಿರ್ದೇಶಕರ ಕಛೇರಿ, ಬೆಂಗಳೂರು. | ಮುಂಬಡ್ತಿ | 24–08–53 | 08–11–82 | 08–11–82 | |
| 22. | ಎಂ.ಟಿ.ಹಿರಂಡಗಿ ನಕೇಗ್ರಂ, ಬಿಜಾಪ್ಮರ | ಮುಂಬಡ್ತಿ | 1–8–55 | 27–10–79 | 27–10–79 | |
| 23. | ಮಂಜುಳಾ.. ಬಿ.ಎಸ್. ನ.ಕೇ.ಗ್ರಂ, ಉ.ವ. ಬೆಂಗಳೂರು.. | ಮುಂಬಡ್ತಿ | 6–4–65 | 11–9–97 | 11–9–97 | |
| 24. | ದೇವೇಂದ್ರ.ಹ.ಕೇಸರಿ ನಕೇಗ್ರಂ ಗುಲ್ಬರ್ಗಾ | ಮುಂಬಡ್ತಿ | 22–7–64 | 18–9–97 | 18–9–97 | |
| 25. | ಎಂ.ಬಿ. ಕರಿಗಾರ ಜಿಕೇಗ್ರಂ ದಾವಣಗೆರೆ | ಮುಂಬಡ್ತಿ | 3–6–68 | 5–1–2001 | 5–1–2001 | |
| 26. | ಸಿ.ಜೆ.ವೆಂಕಟೇಶ್ ಜಿಕೇಗ್ರಂ ಮಂಗಳೂರು | ಮುಂಬಡ್ತಿ | 20–8–62 | 1–1–2001 | 1–1–2001 | |

| ಕ್ರ.ಸಂ. | ಹೆಸರು<br>ಶ್ರೀಮತಿ/ಶ್ರೀ | ನೇರ ನೇಮಕಾತಿ<br>ಮುಂಬಡ್ತಿ | ಜನ್ಮ ದಿನಾಂಕ | ಸೇವೆಗೆ<br>ಸೇರಿದ<br>ದಿನಾಂಕ | ಅರ್ಹತಾ<br>ದಿನಾಂಕ | ಷರಾ |
|---|---|---|---|---|---|---|
| 1 | 2 | 3 | 4 | 5 | | 11 |
| 27. | ಸಿ.ಪಾರ್ವತಮ್ಮ,<br>ನಕೇಗ್ರಂ, ಪೂ.ವ. ಬೆಂಗಳೂರು. | ಮುಂಬಡ್ತಿ | 1–11–65 | 29–12–00 | 29–12–00 | |
| 28. | ಟಿ. ಕಮಲಾಕರ, ಗ್ರಂಥಪಾಲಕರು,<br>ಜಿ.ಕೇ.ಗ್ರಂ. ಬೀದರ್ | ಮುಂಬಡ್ತಿ | 01–06–67 | 07–12–02 | 07–12–02 | |
| 29. | ಎಂ. ಸರೋಜಮ್ಮ,<br>ಜಿ.ಕೇ.ಗ್ರಂ. ಗ್ರಾ. ಬೆಂಗಳೂರು | ಮುಂಬಡ್ತಿ | 01–06–70 | 10–12–02 | 10–12–02 | |
| 30. | ಎಂ.ಎಂ. ಮಲ್ಲಾರಿ,<br>ನಕೇಗ್ರಂ. ಧಾರವಾಡ | ಮುಂಬಡ್ತಿ | 01–06–53 | 13–07–79 | 19–10–07 | |
| 31. | ಸಿ. ಎಸ್. ಕಾಡಣ್ಣವರ್,<br>ಜಿ.ಕೇ.ಗ್ರಂ, ಬೆಳಗಾಂ | ಮುಂಬಡ್ತಿ | 01–05–53 | 16–07–79 | 19–10–07 | |
| 32. | ರಾಮಯ್ಯ,<br>ಜಿ.ಕೇ.ಗ್ರಂ, ಬಳ್ಳಾರಿ | ನೇರ ನೇಮಕಾತಿ | 01–06–74 | 19–08–10 | – | |
| 33. | ವಿ.ವೈ. ಹಾವಣ್ಣವರ,<br>ನ.ಕೇ.ಗ್ರಂ. ಶಿವಮೊಗ್ಗ | ಮುಂಬಡ್ತಿ | 07–04–55 | 17–08–79 | 11–11–10 | |
| 34. | ಎಂ. ಸಾವಿತ್ರಮ್ಮ,<br>ನಗರ ಜಿ.ಕೇ.ಗ್ರಂ, ಬೆಂಗಳೂರು | ಮುಂಬಡ್ತಿ | 01–06–55 | 13–06–97 | 11–11–10 | |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಬಿ.ಪಟಗಾರ್,**

ಸರ್ಕಾರದ ಅಧೀನ ಕಾರ್ಯದರ್ಶಿ

ಶಿಕ್ಷಣ ಇಲಾಖೆ (ಸಾಮಾನ್ಯ)

**ಪಿ.ಆರ್. 694**

## ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪ–ವಿಭಾಗ ನಂ–2, ವಿಜಾಪೂರ.

### ಪ್ರಕಟಣೆ

**ಸಂಖ್ಯೆ:ಕಾ.ಅ.ಬಿ–2:ಕಾ.ನ.ಪ:ಮಪ್ರ:ಎಸ್.ಆರ್.ನಂ:8/2012, ದಿನಾಂಕ : 23–2–2012**

**ಅರ್ಜಿದಾರರು**

ಶ್ರೀಮತಿ ಬಿಬಿಜಾನ ಗಂಡ ಲಾಲೆಮಶ್ಯಾಕ ಇರಕಲ್,
ಮತ್ತು ಇತರರು, ಸಾ:ನಾವದಗಿ,
ತಾ: ಮುದ್ದೇಬಿಹಾಳ, ಜಿಲ್ಲಾ:ವಿಜಾಪುರ.

**ಪ್ರತಿವಾದಿಗಳು**

1) ಶ್ರೀ ಮಹ್ಮದ ರಫೀಕ್ ತಂದೆ ಡೊಂಗ್ರಿಸಾಬ, ಸತರಕರ, ಸಾ:ವಾರ್ಡ ನಂ.7, ಆಸರ ಮಹಲ್ಲಾ, ವಿಜಾಪುರ.
2) ದಿ ಮ್ಯಾನೇಜರ್ ಲೀಗಲ್, ರಿಲಾಯನ್ಸ್ ಜನರಲ್ ಇನ್ಸೂರನ್ಸ ಕಂ.ಲಿ. ಗುಲ್ಬರ್ಗಾ.
3) ಶ್ರೀಮತಿ ಅಮೀರಬಿ ಗಂಡ ಬಾಬುಸಾಬ ಇರಕಲ್, ಸಾ:ಮಹೇಬೂಬ ನಗರ, ಮುದ್ದೇಬಿಹಾಳ, ಜಿಲ್ಲೆ: ವಿಜಾಪುರ.

ಮೇಲ್ಕಾಣಿಸಿದ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ, **ಶ್ರೀ ಲಾಲೆಮಶ್ಯಾಕ ಇರಕಲ್** ಇವರು ಪ್ರತಿವಾದಿಗಳ ಬಳಿ ಕೆಲಸ ನಿರ್ವಹಿಸುವಾಗ ಮತ್ತು ಕೆಲಸದ ಪರಿಣಾಮದಿಂದಾಗಿ ದಿನಾಂಕ: **11–09–2011 ರಂದು** ಅಪಘಾತಕ್ಕೀಡಾಗಿ ಮೃತನಾಗಿರುತ್ತಾನೆಂದು, ಅಲ್ಲದೇ ತಾವು ಮೃತರ ಅವಲಂಬಿತರಾಗಿರುವದರಿಂದ ಕಾಯ್ದೆಯನ್ವಯ ತಮಗೆ ಬರಬೇಕಾದ ಪರಿಹಾರದ ಹಣವನ್ನು ಪ್ರತಿವಾದಿಗಳಿಂದ ಕೊಡಿಸಿಕೊಡಬೇಕೆಂದು ವಿನಂತಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವದೇನೆಂದರೆ, ಈ ಬಗ್ಗೆ ಏನಾದರು ಆಕ್ಷೇಪಣೆಗಳಿದ್ದರೆ, ಹಾಗೂ ಅರ್ಜಿದಾರರಲ್ಲದೇ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವದಾದರೇ, ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ / ಈ ನ್ಯಾಯಾಲಯದ ಸೂಚನಾ ಫಲಕದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಪರ ಆಕ್ಷೇಪಣೆಯಾಗಲೀ ಅಥವಾ ಅರ್ಜಿಯಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು. ಹಾಗೂ ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಮತ್ತು ಅರ್ಜಿಗಳನ್ನು ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವದಿಲ್ಲ.

**ಜಿ. ಸಿದ್ಧಲಿಂಗಪ್ಪ ಆಲೂರು,**
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ಮತ್ತು
ಕಾರ್ಮಿಕ ಅಧಿಕಾರಿ, ಉಪ–ವಿಭಾಗ–2, ವಿಜಾಪೂರ.

## ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪ–ವಿಭಾಗ ನಂ–2, ವಿಜಾಪೂರ.

### ಪ್ರಕಟಣೆ

**ಸಂಖ್ಯೆ:ಕಾ.ಅ.ಬಿ–2:ಕಾ.ನ.ಪ:ಮಪ್ರ:ಎಸ್.ಆರ್.ನಂ:19/2012, ದಿನಾಂಕ : 11–4–2012**

**ಅರ್ಜಿದಾರರು**

ಶ್ರೀಮತಿ ನೀಲಮ್ಮ ಗಂಡ ಬಸಪ್ಪ ಬೈಲವಾಡ ಮತ್ತು ಇನ್ನೊಬ್ಬರು, ಸಾ: ಹುನಕುಂಟಿ, ತಾ: ಮುದ್ದೇಬಿಹಾಳ, ಜಿಲ್ಲಾ: ವಿಜಾಪುರ

**ಪ್ರತಿವಾದಿಗಳು**

1) ಮಿ. ನಾಗೇಂದ್ರಬಾಬು ಎಂ. ಪಾಪ್ಯೆ ಸಾ: ನೆಲಮಂಗಲ್, ಬೆಂಗಳೂರು
2) ದಿ ಬ್ರಾಂಚ್ ಮ್ಯಾನೇಜರ್, ನ್ಯೂ ಇಂಡಿಯಾ ಅಶುರೆನ್ಸ್ ಕಂ.ಲಿ. ವಿಜಾಪುರ

ಮೇಲ್ಕಾಣಿಸಿದ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ, **ಶ್ರೀ ಸಂಗಪ್ಪ @ ಸಂಗಮೇಶ ತಂದೆ ಬಸಪ್ಪ ಬೈಲವಾಡಿ** ಇವರು ಪ್ರತಿವಾದಿಗಳ ಬಳಿ ಕೆಲಸ ನಿರ್ವಹಿಸುವಾಗ ಮತ್ತು ಕೆಲಸದ ಪರಿಣಾಮದಿಂದಾಗಿ ದಿನಾಂಕ: **28–11–2011 ರಂದು** ಅಪಘಾತಕ್ಕೀಡಾಗಿ ಮೃತನಾಗಿರುತ್ತಾನೆಂದು, ಅಲ್ಲದೇ ತಾವು ಮೃತರ ಅವಲಂಬಿತರಾಗಿರುವದರಿಂದ ಕಾಯ್ದೆಯನ್ವಯ ತಮಗೆ ಬರಬೇಕಾದ ಪರಿಹಾರದ ಹಣವನ್ನು ಪ್ರತಿವಾದಿಗಳಿಂದ ಕೊಡಿಸಿಕೊಡಬೇಕೆಂದು ವಿನಂತಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವದೇನೆಂದರೆ, ಈ ಬಗ್ಗೆ ಏನಾದರು ಆಕ್ಷೇಪಣೆಗಳಿದ್ದರೆ, ಹಾಗೂ ಅರ್ಜಿದಾರರಲ್ಲದೇ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವದಾದರೇ, ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ / ಈ ನ್ಯಾಯಾಲಯದ ಸೂಚನಾ ಫಲಕದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಪರ ಆಕ್ಷೇಪಣೆಯಾಗಲೀ ಅಥವಾ ಅರ್ಜಿಯಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು. ಹಾಗೂ ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಮತ್ತು ಅರ್ಜಿಗಳನ್ನು ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವದಿಲ್ಲ.

**ಜಿ. ಸಿದ್ಧಲಿಂಗಪ್ಪ ಆಲೂರು,**
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ಮತ್ತು
ಕಾರ್ಮಿಕ ಅಧಿಕಾರಿ, ಉಪ–ವಿಭಾಗ–2, ವಿಜಾಪೂರ.

**ಪಿ.ಆರ್. 715**

## ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪ–ವಿಭಾಗ ನಂ–2, ವಿಜಾಪೂರ.

### ಪ್ರಕಟಣೆ

**ಸಂಖ್ಯೆ:ಕಾ.ಅ.ಬಿ–2:ಕಾ.ನ.ಪ:ಮಪ್ರ:ಎಸ್.ಆರ್.ನಂ:23/2012, ದಿನಾಂಕ : 11–4–2012**

**ಅರ್ಜಿದಾರರು**

ಶ್ರೀಮತಿ ಅನಿತಾ ಗಂಡ ರಾಮಸಿಂಗ್ @ ರಾಣಾ ಚವ್ಹಾಣ, ಸಾ: ಹೊನವಾಡ, ನಾವದಗಿ, ತಾ: ಜಿಲ್ಲಾ: ವಿಜಾಪುರ

**ಪ್ರತಿವಾದಿಗಳು**

1) ಶ್ರೀ ದಿಲೀಪ್ ತಂದೆ ಶ್ರೀಪತ್‌ರಾವ ಬಿರಾಜದಾರ, ಸಾ: ಶಹಾಪೂರ ಗಲ್ಲಿ, ಬಸವಕಲ್ಯಾಣ, ಜಿಲ್ಲೆ: ವಿಜಾಪುರ
2) ದಿ ಬ್ರಾಂಚ್ ಮ್ಯಾನೇಜರ್, ರಾಯಲ ಸುಂದರಂ ಇನ್ಸೂರೆನ್ಸ್ ಕಂ.ಲಿ. ಚನ್ನೈ–600002

ಮೇಲ್ಕಾಣಿಸಿದ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ, **ಶ್ರೀ ಪರಮೇಶ್ವರ ತಂದೆ ರಾಮಸಿಂಗ್** @ **ರಾಣಾ ಚವ್ಹಾಣ** ಇವರು ಪ್ರತಿವಾದಿಗಳ ಬಳಿ ಕೆಲಸ ನಿರ್ವಹಿಸುವಾಗ ಮತ್ತು ಕೆಲಸದ ಪರಿಣಾಮದಿಂದಾಗಿ ದಿನಾಂಕ: **10–01–2012 ರಂದು** ಅಪಘಾತಕ್ಕೀಡಾಗಿ ಮೃತನಾಗಿರುತ್ತಾನೆಂದು, ಅಲ್ಲದೇ ತಾವು ಮೃತರ ಅವಲಂಬಿತರಾಗಿರುವದರಿಂದ ಕಾಯ್ದೆಯನ್ವಯ ತಮಗೆ ಬರಬೇಕಾದ ಪರಿಹಾರದ ಹಣವನ್ನು ಪ್ರತಿವಾದಿಗಳಿಂದ ಕೊಡಿಸಿಕೊಡಬೇಕೆಂದು ವಿನಂತಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವದೇನೆಂದರೆ, ಈ ಬಗ್ಗೆ ಏನಾದರು ಆಕ್ಷೇಪಣೆಗಳಿದ್ದರೆ, ಹಾಗೂ ಅರ್ಜಿದಾರರಲ್ಲದೇ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವದಾದರೇ, ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ / ಈ ನ್ಯಾಯಾಲಯದ ಸೂಚನಾ ಫಲಕದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಪರ ಆಕ್ಷೇಪಣೆಯಾಗಲೀ ಅಥವಾ ಅರ್ಜಿಯಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು. ಹಾಗೂ ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಮತ್ತು ಅರ್ಜಿಗಳನ್ನು ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವದಿಲ್ಲ.

**ಜಿ. ಸಿದ್ಧಲಿಂಗಪ್ಪ ಆಲೂರು,**
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ಮತ್ತು
ಕಾರ್ಮಿಕ ಅಧಿಕಾರಿ, ಉಪ–ವಿಭಾಗ–2, ವಿಜಾಪೂರ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪ–ವಿಭಾಗ ನಂ–2, ವಿಜಾಪೂರ.**

**ಪ್ರಕಟಣೆ**

**ಸಂಖ್ಯೆ:ಕಾ.ಅ.ಬಿ–2:ಕಾ.ನ.ಪ:ಮಪ್ರ:ಎಸ್.ಆರ್.ನಂ:25/2012, ದಿನಾಂಕ : 23–4–2012**

| **ಅರ್ಜಿದಾರರು** | **ಪ್ರತಿವಾದಿಗಳು** |
|---|---|
| ಶ್ರೀಮತಿ ಶಹಜಹಾನ ಗಂಡ ಜಫೀರ ಆಲಮ ಶೇಖ ಮತ್ತು ಇತರರು, ಸಾ:ರಾಮಪುರ ಕೆಸೋ, ದಾವುದ ನಗರ, ಪೋಸ್ಟ ಫಲಕಾನ, ಜಿಲ್ಲೆ:ಶಿವಘರ, ಬಿಹಾರ ರಾಜ್ಯ. ಹಾಲಿ ವಾಸ: ವಿಜಾಪುರ | 1) ದಿ ಪ್ರೋಪ್ರೈಟರ್, ಮೆ: ಐಡಿಯಲ್ ಮೂವರ್ಸ ಪ್ರೈ ಲಿ., ಬಿ.3050, ಸ್ಟೀಲ್ ಯಾರ್ಡ, ಕಾಲಂಬೋಳಿ, ತಾ: ಪನವೇಲ್, ಜಿಲ್ಲೆ:ರಾಯಘಡ, ಕಾಲಂಬೋಳಿ<br>2) ದಿ ಮ್ಯಾನೇಜರ್ ಲಿಗಲ್, ರಿಲಾಯನ್ಸ್ ಜನರಲ್ ಇನ್ಸೂರನ್ಸ್ ಕಂ.ಲಿ., ಗುಲಬರ್ಗಾ. |

ಮೇಲ್ಕಾಣಿಸಿದ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ, **ಶ್ರೀ ಮಾಸೂಮ ತಂದೆ ಜಫೀರ ಆಲಮ ಶೇಖ** ಇವರು ಪ್ರತಿವಾದಿಗಳ ಬಳಿ ಕೆಲಸ ನಿರ್ವಹಿಸುವಾಗ ಮತ್ತು ಕೆಲಸದ ಪರಿಣಾಮದಿಂದಾಗಿ ದಿನಾಂಕ: **18–12–2011 ರಂದು** ಅಪಘಾತಕ್ಕೀಡಾಗಿ ಮೃತ ನಾಗಿರುತ್ತಾನೆಂದು, ಅಲ್ಲದೇ ತಾವು ಮೃತರ ಅವಲಂಬಿತ ರಾಗಿರುವದರಿಂದ ಕಾಯ್ದೆಯನ್ವಯ ತಮಗೆ ಬರಬೇಕಾದ ಪರಿಹಾರದ ಹಣವನ್ನು ಪ್ರತಿವಾದಿಗಳಿಂದ ಕೊಡಿಸಿಕೊಡಬೇಕೆಂದು ವಿನಂತಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವದೇನೆಂದರೆ, ಈ ಬಗ್ಗೆ ಏನಾದರು ಆಕ್ಷೇಪಣೆಗಳಿದ್ದರೆ, ಹಾಗೂ ಅರ್ಜಿದಾರರಲ್ಲದೇ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವದಾದರೇ, ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ / ಈ ನ್ಯಾಯಾಲಯದ ಸೂಚನಾ ಫಲಕದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಪರ ಆಕ್ಷೇಪಣೆಯಾಗಲೀ ಅಥವಾ ಅರ್ಜಿಯಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು. ಹಾಗೂ ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಮತ್ತು ಅರ್ಜಿಗಳನ್ನು ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವದಿಲ್ಲ.

**ಜಿ. ಸಿದ್ಧಲಿಂಗಪ್ಪ ಆಲೂರು,**
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ಮತ್ತು
ಕಾರ್ಮಿಕ ಅಧಿಕಾರಿ, ಉಪ–ವಿಭಾಗ–2, ವಿಜಾಪೂರ.

**ಪಿ.ಆರ್. 716**

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯ.**

**ಸಂಖ್ಯೆ: ಎಸ್‌ಡಿಕೆ/17/ಡಿಟಿಸಿಆರ್/2010–11, ದಿನಾಂಕ: 10–05–2012**

**ಉಪಸ್ಥಿತರು** : ಬಿ.ವಿ. ಹೂವಪ್ಪಗೌಡ, ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು

**ಪಿರ್ಯಾದಿ** : ಪೊಲೀಸ್ ಉಪ ನಿರೀಕ್ಷಕರು, ಸುಳ್ಯ ಪೊಲೀಸ್ ಠಾಣೆ, ಸುಳ್ಯ.

**ಆರೋಪಿಗಳು** : 1) ಶಂಶುದ್ದೀನ್, ಬಿನ್:ಆಲಿಕುಂಜ್ಞಿ, ನೇಲ್ಯ ಮಜಲು ಹೌಸ್, ಬೆಳ್ಳಾರೆ ಗ್ರಾಮ, ಸುಳ್ಯ ತಾಲೂಕು

**ವಾಹನದ ಮಾಲೀಕರು:**

ಶ್ರೀಮತಿ. ಅಸ್ಮಾಬಿ, ಕೋಂ:ಬಿ.ಎ.ಶಂಶುದ್ದೀನ್, ವಾಸ: ಕುಕ್ಕುಂಬಳ ಮನೆ, ಪೆರುವಾಜೆ ಗ್ರಾಮ ಮತ್ತು ಅಂಚೆ, ಸುಳ್ಯ ತಾಲೂಕು

**ಪ್ರಕರಣದ ಮುಖ್ಯಾಂಶಗಳು:**

ಪೊಲೀಸ್ ಉಪ ನಿರೀಕ್ಷಕರು, ಸುಳ್ಯ ಪೊಲೀಸ್ ಠಾಣೆ ಇವರು ದಿ:11–8–2010 ರಂದು ಸಂಜೆ 4–15 ಗಂಟೆ ಸಮಯಕ್ಕೆ ಬೆಳ್ಳಾರೆ ಕಡೆಯಿಂದ ಸುಳ್ಯ ಕಡೆಗೆ KA–21–4508 ನೊಂದಣಿ ಸಂಖ್ಯೆ ಇರುವ ಬಜಾಜ್ ಆಟೋ ರಿಕ್ಷಾ ಇದರಲ್ಲಿ ಅಕ್ರಮವಾಗಿ ಮದ್ಯ ತುಂಬಿದ ಬಾಟಲಿಗಳ ಬಾಕ್ಸ್‌ಗಳು ಸಾಗಾಟವಾಗುತ್ತಿದೆ ಎಂದು ದೊರೆತ ಖಚಿತ ವರ್ತಮಾನದ ಮೇರೆಗೆ ವಾಹನ ತಪಾಸಣೆ ಪ್ರಯುಕ್ತ ಸುಳ್ಯ ತಾಲೂಕು ಐವರ್ನಾಡು ಗ್ರಾಮದ ಸರ್ಕಾರಿ ಜೂನಿಯರ್ ಕಾಲೇಜು ಬಳಿ ತಲುಪುವಾಗ, ಬೆಳ್ಳಾರೆ ಕಡೆಯಿಂದ ಮಾಹಿತಿಯಂತೆ ಅಟೋ ರಿಕ್ಷಾ ಬರುತ್ತಿರುವುದನ್ನು ಗಮನಿಸಿ ಸದ್ರಿ ಅಟೋ ರಿಕ್ಷಾವನ್ನು ತಡೆದು ನಿಲ್ಲಿಸಿ ಪರಿಶೀಲಿಸಿದಾಗ 2 ರಟ್ಟಿನ ಬಾಕ್ಸ್‌ಗಳಲ್ಲಿ 180 ಎಂಎಲ್‌ನ ಒಟ್ಟು 90 ಬಾಟಲಿಗಳಲ್ಲಿ 16.200 ಲೀ ಮದ್ಯ ಪತ್ತೆಯಾಗಿ, ವಾಹನ ಮತ್ತು ಮದ್ಯವನ್ನು ಜಪ್ತುಪಡಿಸಿಕೊಂಡು, ಇದು ಕರ್ನಾಟಕ ಅಬಕಾರಿ ಕಾಯಿದೆ 32,34,38ಎ ರಂತೆ ಅಪರಾಧ ಹಾಗೂ 43ಎ ರ ಪ್ರಕಾರ ಶಿಕ್ಷಾರ್ಹವಾಗಿರುವುದರಿಂದ, ಚಾಲಕ/ಅರೋಪಿಯಾದ ಶಂಶುದ್ದೀನ್, ಬಿನ್: ಅಲಿ ಕುಂಜ್ಞಿ, ನೇಲ್ಯ ಮಜಲು ಹೌಸ್, ಬೆಳ್ಳಾರೆ ಗ್ರಾಮ, ಸುಳ್ಯ ತಾಲೂಕು ಇವರ ವಿರುದ್ಧ ಸುಳ್ಯ ಪೊಲೀಸ್ ಠಾಣೆ ಕ್ರೈಂ ಸಂ: 0157/2010, ದಿ:11–8–2010ರಂತೆ ಮೊಕದ್ದಮೆ ದಾಖಲಿಸಿಕೊಂಡು, ಪ್ರಕರಣದ ಸೊತ್ತು ಹಾಗೂ ಕಡತವನ್ನು ವಿಲೇಯ ಮುಂದಿನ ಕಾನೂನು ಕ್ರಮದ ಬಗ್ಗೆ ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದ.ಕ ಜಿಲ್ಲೆ, ಮಂಗಳೂರುರವರ ದಿ:17–8–2010ರ ಅನುಮತಿಯಂತೆ ದಿ: 1–9–2010 ರಂದು ಅಬಕಾರಿ ನಿರೀಕ್ಷಕರು, ಸುಳ್ಯ ವಲಯ ಇವರಿಗೆ ಹಸ್ತಾಂತರಿಸಿರುತ್ತಾರೆ.

**ಜಪ್ತುಪಡಿಸಿದ ಸೊತ್ತುಗಳು ಈ ಕೆಳಗಿನಂತಿವೆ:**

1) ಬಜಾಜ್ ಅಟೋ ರಿಕ್ಷಾ ಸಂ: KA–21–4508

2) 180 ಎಂಎಲ್‌ನ ಸೋನಿ ಪೈನ್ ವಿಸ್ಕಿ ಎಂಬ ಹೆಸರಿನ 45 ಬಾಟಲಿಗಳಲ್ಲಿ –8.100 ಲೀಟರು ಮದ್ಯ

3) 180 ಎಂಎಲ್‌ನ ಮೈಸೂರು ಲ್ಯಾನ್ಸರ್ ವಿಸ್ಕಿ ಎಂಬ ಹೆಸರಿನ 45 ಬಾಟಲಿಗಳಲ್ಲಿ 8.100 ಲೀಟರು ಮದ್ಯ

(ಕ್ರ.ಸಂ:1 ಮತ್ತು 2ರ ಮದ್ಯದಿಂದ ತಲಾ ಒಂದೊಂದರಂತೆ ಒಟ್ಟು 2 ಬಾಟಲಿಗಳನ್ನು ರಸಾಯನಿಕ ಪರೀಕ್ಷೆಗಾಗಿ ಮಾದರಿ ತೆಗೆಯಲಾಗಿದೆ)

ವಶಪಡಿಸಿಕೊಂಡ ವಾಹನದ ಬಿ ರಿಜಿಸ್ಟ್ರಾರ್ ವರದಿಯನ್ನು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಪುತ್ತೂರು ದ.ಕ ಜಿಲ್ಲೆ ಇವರಿಂದ ತನಿಖಾಧಿಕಾರಿಗಳ ಮುಖಾಂತರ ಪಡೆಯಲಾಗಿದ್ದು, ಸದ್ರಿ ವರದಿಯಲ್ಲಿ ಶ್ರೀಮತಿ. ಆಸ್ಮಾಬಿ, ಕೋಂ. ಶಂಶುದ್ದೀನ್, ಪೆರುವಾಜೆ ವಯಾ ಮಣಿಕ್ಕರ , ಸುಳ್ಯ ತಾಲೂಕು ಇವರು ದಿ: 27–1–2006 ರಿಂದ ಅನ್ವಯವಾಗುವಂತೆ ವಾಹನದ ಮಾಲೀಕರಾಗಿರುವುದಾಗಿ ಹಾಗೂ ಎಸ್‌ಸಿಡಿಸಿಸಿ ಬ್ಯಾಂಕ್ ಲಿಮಿಟೆಡ್, ಬೆಳ್ಳಾರೆ, ದ.ಕ ಜಿಲ್ಲೆ ಇವರು ವಾಹನದ ಹೆಚ್.ಪಿ.ಎ ದಾರರಾಗಿರುವುದಾಗಿ ದೃಢೀಕೃತವಾಗಿರುವ ಮೇರೆಗೆ ವಾಹನದ ಮಾಲೀಕ,ಹೆಚ್.ಪಿ.ಎ ದಾರರು ಮತ್ತು ಅರೋಪಿತ ವ್ಯಕ್ತಿಗೆ ಈ ಪ್ರಾಧಿಕಾರದಿಂದ ದಿ:22–9–2010ರಂದು ಕರ್ನಾಟಕ ಅಬಕಾರಿ ಕಾಯಿದೆ ಕಲಂ 43 ಬಿ ರಡಿಯಲ್ಲಿ ನೀಡಲಾದ ಕಾರಣ ಕೇಳಿ ನೋಟಿಸನ್ನು ನೊಂದಾಯಿತ ಅಂಚೆ ಮೂಲಕ ರವಾನಿಸಲಾಗಿದ್ದು, ವಾಹನದ ಮಾಲೀಕರು ಅದನ್ನು ಸ್ವೀಕರಿಸಿಕೊಂಡು ದಿ:14–10–2010 ರಂದು ಸದ್ರಿ ನೋಟಿಸಿಗೆ ಉತ್ತರಿಸುತ್ತಾ, ಪ್ರಕರಣದಲ್ಲಿ ಹೊರಿಸಲಾದ ಅರೋಪವನ್ನು ಅಲ್ಲಗೆಳೆದಿರುತ್ತಾರೆ ಹಾಗೂ ಪ್ರಕರಣಕ್ಕೂ ವಾಹನಕ್ಕೂ ಯಾವುದೇ ಸಂಬಂಧವಿಲ್ಲದೇ ಇರುವುದರಿಂದ ವಾಹನವನ್ನು ಬಿಡುಗಡೆಗೊಳಿಸಬೇಕಾಗಿ ವಿನಂತಿಸಿರುತ್ತಾರೆ.

ವಾಹನದ ಮಾಲೀಕರೆಂದು ಹೇಳಿಕೊಂಡ ಶ್ರೀಮತಿ. ಆಸ್ಮಾಬಿ, ಕೋಂ. ಶಂಶುದ್ದೀನ್, ಪೆರುವಾಜೆ ವಯಾ ಮಣಿಕ್ಕರ , ಸುಳ್ಯ ತಾಲೂಕು ಇವರು ತಮ್ಮ ವಕೀಲರ ಮುಖಾಂತರ ದಿ:30–8–2010ರಂದು ಈ ಪ್ರಾಧಿಕಾರಕ್ಕೆ ಅರ್ಜಿಯೊಂದನ್ನು ಸಲ್ಲಿಸಿ ವಾಹನದ ಮಧ್ಯಂತರ ಬಿಡುಗಡೆಗಾಗಿ ಕೋರಿದ್ದು ,ಸದ್ರಿ ಅರ್ಜಿಯನ್ನು ವಿಚಾರಣೆ ನಡೆಸಿ ವಾಹನದ ಮೌಲ್ಯ ರೂ.13,500/– ರ ಮೊತ್ತಕ್ಕೆ ಸಮಾನವಾದ ಬ್ಯಾಂಕ್ ಗ್ಯಾರೆಂಟಿಯನ್ನು ಒಪ್ಪಿಸುವ ಹಾಗೂ ಇತರೆ ಷರತ್ತುಗಳ ಮೇಲೆ ದಿನಾಂಕ:27–1–2011ರಂದು ವಾಹನದ ಮಧ್ಯಂತರ ಬಿಡುಗಡೆ ಅದೇಶ ಹೊರಡಿಸಲಾಗಿರುತ್ತದೆ. ಸದ್ರಿ

ಅದೇಶಕ್ಕನುಗುಣವಾಗಿ ವಾಹನದ ಮಾಲೀಕರು ದಿ:3–2–2011ರಂದು ಪ್ರಾಧಿಕಾರದ ಮುಂದೆ ಖುದ್ದಾಗಿ ಹಾಜರಾಗಿ ಮಧ್ಯಂತರ ಅದೇಶದ ಎಲ್ಲಾ ಷರತ್ತುಗಳನ್ನು ಪಾಲಿಸುವುದಾಗಿ ಛಾಪಾ ಕಾಗದದಲ್ಲಿ ಮುಚ್ಚಳಿಕೆಯನ್ನು ನೀಡಿದ್ದರೂ ಷರತ್ತಿನಂತೆ ರೂ.13,500/–ಮೊತ್ತದ ಬ್ಯಾಂಕ್ ಗ್ಯಾರೆಂಟಿ ಯನ್ನು ನೀಡಿ ವಾಹನವನ್ನು ಮದ್ಯಂತರ ಬಿಡುಗಡೆ ಪಡೆಯಲು ವಿಫಲರಾಗಿದ್ದು ಈ ಬಗ್ಗೆ ವಾಹನದ ಮಾಲೀಕರಿಗೆ ತಿಳುವಳಿಕೆ ನೋಟಿಸು ನೀಡಲಾಗಿದ್ದರೂ ವಾಹನವನ್ನು ಮದ್ಯಂತರ ಪಡೆಯುವ ಬಗ್ಗೆ ಅವರಿಂದ ಯಾವುದೇ ಪ್ರತಿಕ್ರಿಯೆ ವ್ಯಕ್ತವಾಗಿರುವುದಿಲ್ಲ.

ಅಬಕಾರಿ ನಿರೀಕ್ಷಕರು, ಸುಳ್ಯ ವಲಯ ಇವರ ವರದಿ ಸಂಖ್ಯೆ: ಅನಿ/ಸುವ/ಎಸಿಆರ್/ 13/2010–11, ದಿ:27–1–2011ರೊಂದಿಗೆ ವಾಹನದ ಬಿ ರಿಜಿಸ್ಟ್ರಾರ್ ಎಕ್ಸ್‌ಟ್ರಾಕ್ಟ್ ವರದಿ ಮತ್ತು ಮೌಲ್ಯ ಮಾಪನ ವರದಿ ಹಾಗೂ ಮದ್ಯದ ಮಾದರಿಗಳನ್ನು ರಸಾಯನಿಕ ವಿಶ್ಲೇಷಣೆಗೆ ಒಳಪಡಿಸಿದ ಬಗ್ಗೆ ವಿಶ್ಲೇಷಣಾ ವರದಿ ಪ್ರತಿಯನ್ನು ಪ್ರಾಧಿಕಾರಕ್ಕೆ ಸಲ್ಲಿಸಿ ವಶಪಡಿಸಿಕೊಂಡ ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಮದ್ಯವನ್ನು ನಾಶಪಡಿಸಲು ಅದೇಶಕ್ಕಾಗಿ ಶಿಫಾರಸ್ಸು ಮಾಡಿರುತ್ತಾರೆ. ರಸಾಯನಿಕ ತಜ್ಞರು, ಮಂಗಳೂರು ಇವರ ವರದಿ ಸಂ:ಇ–188–2 ದಿ:26–8–2010ರ ವರದಿಯಲ್ಲಿ ಮದ್ಯದಲ್ಲಿ ಮದ್ಯಸಾರದ ತೀಕ್ಷ್ಣತೆ 42.0% ಇರುವುದಾಗಿ ವಿಶ್ಲೇಷಕರು ದೃಢೀಕರಿಸಿರುತ್ತಾರೆ. ತನಿಖಾಧಿಕಾರಿಗಳ ಶಿಫಾರಸ್ಸು ಮೇರೆಗೆ ವಾಹನದ ಮುಟ್ಟುಗೋಲು ಪ್ರಕ್ರಿಯೆಯನ್ನು ಕಾಯ್ದಿರಿಸಿ ಜಪ್ತುಪಡಿಸಿಕೊಳ್ಳಲಾದ ಮದ್ಯವನ್ನು ದಿ:11–2–2011ರ ಆದೇಶದಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಸರ್ಕಾರದ ಪ್ರಸ್ತುತ ನೀತಿಯನ್ವಯ ನಾಶ ಪಡಿಸಲು ಆದೇಶಿಸಲಾಗಿದ್ದು ಮದ್ಯವನ್ನು ದಿ:25–3–2011ರಂದು ನಾಶಪಡಿಸಲಾಗಿರುತ್ತದೆ.

ನಂತರ ಪ್ರಕರಣದಲ್ಲಿ ವಿಚಾರಣೆಯನ್ನು ಪ್ರಾರಂಬಿಸಿ ಸಾಕ್ಷಿಗಳನ್ನು ವಿಚಾರಣೆಗೆ ಒಳಪಡಿಸಿ ಅಭಿಯೋಗದ ಪರ ಪ್ರಾ.ಸಾ–1,2 ಮತ್ತು 3 ರವರನ್ನು ವಿಚಾರಣೆ ನಡೆಸಿ ನಿಶಾನೆ ಪಿ–1ರಿಂದ 5 ರವರೆಗೆ ಗುರುತಿಸಿಕೊಳ್ಳಲಾಗಿರುತ್ತದೆ. ವಿಚಾರಣೆಗೆ ಹಾಜರಾಗುವಂತೆ ವಾಹನದ ಮಾಲೀಕರಿಗೆ ಹಾಗೂ ಅವರ ಪರ ವಕೀಲರಿಗೆ ನಿರಂತರ ನೋಟಿಸುಗಳನ್ನು ನೀಡಲಾಗಿದ್ದರೂ ಪ್ರಾಧಿಕಾರದ ಮುಂದೆ ಹಾಜರಾಗಲು ವಿಫಲರಾಗಿರುತ್ತಾರೆ. ಹಾಗೂ ರಕ್ಷಣಾ ಪರ ವಕೀಲರಾದ ಶ್ರೀ. ವೆಂಕಪ್ಪ ಗೌಡ ಇವರು ದಿ:10–4–2012ರಂದು ಪ್ರಾಧಿಕಾರಕ್ಕೆ ಲಿಖಿತ ಅರ್ಜಿಯನ್ನು ಒಪ್ಪಿಸಿ ತಮ್ಮ ವಕಾಲತ್ತನ್ನು ಹಿಂಪಡೆದು ಕೇಸಿನಿಂದ ನಿವೃತ್ತರಾಗುವುದಾಗಿ ತಿಳಿಸಿರುತ್ತಾರೆ.

ಈ ಪ್ರಕರಣದಲ್ಲಿ ಸರ್ಕಾರದ ಅಭಿಯೋಗದ ಪರ ಸಲ್ಲಿಸಿರುವ ಸಾಕ್ಷ್ಯಾಧ್ಯಾರಗಳಿಂದ ಈ ಕೆಳಗಿನ ವಿವಾಧಾಂಶಗಳನ್ನು ತೀರ್ಮಾನಿಸುವುದು ಅಗತ್ಯವಾಗಿದ್ದು ಪರಿಶೀಲನಾಂಶಗಳು ಈ ಕೆಳಗಿನಂತಿರುತ್ತದೆ.

**ವಿವಾಧಾಂಶಗಳು**

1) ದಿನಾಂಕ:11–8–2010ರಂದು ಅಟೋ ರಿಕ್ಷಾ ನೊಂದಣಿ ಸಂ: KA–21–4508 ರಲ್ಲಿ ಸಾಗಾಣಿಕೆಯಾದ ಸೊತ್ತು ಮದ್ಯ ಎಂಬ ಬಗ್ಗೆ ರಸಾಯನಿಕ ವಿಶ್ಲೇಷಣಾ ವರದಿಯಿಂದ ದೃಢೀಕೃತವಾಗಿದೆಯೇ?

2) ದಿನಾಂಕ:11–8–2010ರಂದು ಅಟೋ ರಿಕ್ಷಾ ನೊಂದಣಿ ಸಂ: KA–21–4508 ಇದರಲ್ಲಿ ಅಕ್ರಮವಾಗಿ ಮದ್ಯ ಸಾಗಾಣಿಕೆಯಾಗಿದೆಯೇ? ಮತ್ತು ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆ ಮತ್ತು ನಿಯಮಗಳ ರೀತ್ಯಾ ಅಪರಾಧಕ್ಕೆ ಬಳಸಲಾಗಿದೆಯೇ?

3) ವಶಪಡಿಸಿಕೊಂಡಿರುವ ವಾಹನದ ಮಾಲೀಕರು ತನ್ನ ಗಮನಕ್ಕೆ ಬಾರದೇ ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆಯಡಿ ಮದ್ಯ ಸಾಗಾಣಿಕೆಗೆ ಉಪಯೋಗಿಸಲ್ಪಟ್ಟಿತ್ತು ಎಂಬುದನ್ನು ಸಾಬೀತು ಪಡಿಸಿದ್ದಾರೆಯೇ? ಅಥವಾ ಇಲ್ಲವೇ?

4) ಜಪ್ತು ಪಡಿಸಲಾಗಿರುವ ವಾಹನ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆಯೇ ಅಥವಾ ಇಲ್ಲವೇ?

ಒಂದನೇ ಮತ್ತು ಎರಡನೇ ಅಂಶಗಳನ್ನು ಗುಣಾತ್ಮಕವಾಗಿ, ಮೂರನೇ ಅಂಶವನ್ನು ನಕರಾತ್ಮಕವಾಗಿ ಹಾಗೂ ನಾಲ್ಕನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸಾ–1:–**

ಪ್ರಕರಣದ ಸ್ವತಂತ್ರ ಸಾಕ್ಷಿದಾರರಾದ ಶ್ರೀ.ಪಾರ್ತಿವನ್, ಅಡ್ಯಡ್ಕ, ಸಿ.ಆರ್.ಸಿ ಕಾಲೋನಿ, ತೋಡಿಕಾನ, ಸುಳ್ಯ ತಾಲೂಕು ಇವರು ದಿ:28–7–2011ರಂದು ಪ್ರಾಧಿಕಾರದ ಮುಂದೆ ಸಾಕ್ಷಿ ನೀಡುತ್ತಾ , ಈಗ ತೋರಿಸಿದ ಮಹಜರಿನಲ್ಲಿ ತನ್ನ ಸಹಿ ಇರುತ್ತದೆ, ಮಹಜರನ್ನು ನಿ.ಪಿ–1 ಎಂದು, ಸಾಕ್ಷಿ ಸಹಿಯನ್ನು ನಿ.ಪಿ–1 ಎ ಎಂದು ಗುರುತಿಸಲಾಯಿತು. ನಿ.ಪಿ–1 ಎ ಸಹಿಯನ್ನು ಸುಳ್ಯ ಪೊಲೀಸ್ ಠಾಣೆಯಲ್ಲಿ ತನ್ನ ಸ್ವಂತ ಕೆಲಸಕ್ಕೆ ಹೋದ ಸಂದರ್ಭ ಮಾಡಿರುತ್ತೇನೆ, ಅದರೆ ನಿ.ಪಿ–1 ಮಹಜರಿನಲ್ಲಿ ಏನು ಬರೆದಿದೆ ಎಂಬ ಅಂಶ ತನಗೆ ಗೊತ್ತಿರುವುದಿಲ್ಲ,ಪೊಲೀಸರು ಅದರಲ್ಲಿರುವುದನ್ನು ತನಗೆ ಓದಿ ಹೇಳಿರುವುದಿಲ್ಲ ಎಂದು ಪ್ರತಿಕೂಲ ಸಾಕ್ಷಿ ನುಡಿದಿರುತ್ತಾರೆ.

ಸರ್ಕಾರಿ ಅಭಿಯೋಜಕರ ಪಾಟೀ ಸವಾಲಿಗೆ ಉತ್ತರಿಸುತ್ತಾ, ದಿ:11–8–2010ರಂದು ಪ್ರವೀಣ ಜೆ ನೀಲಮ್ಮನವರು ಪೊ.ಉ.ನಿ ಸುಳ್ಯ ಇವರು ಠಾಣೆಯಲ್ಲಿದ್ದಾಗ ಬೆಳ್ಳಾರೆಯಿಂದ ಸುಳ್ಯ ಕಡೆಗೆ ಕೆಎ–21–4508 ಬಜಾಜ್ ರಿಕ್ಷಾದಲ್ಲಿ ಅದರ ಚಾಲಕನು ಮದ್ಯ ತುಂಬಿದ ಬಾಕ್ಸ್‌ಗಳನ್ನು ಅಕ್ರಮವಾಗಿ ಸಾಗಿಸುತ್ತಿರುವಾಗ ಬಂದ ಖಚಿತ ವರ್ತಮಾನದ ಮೇರೆಗೆ ಪಿಎಸ್ ಐ ರವರು ಅವರ ಸಿಬ್ಬಂಧಿ ಜೊತೆ ಇಲಾಖಾ ಜೀಪಿನಲ್ಲಿ ಐವರ್ನಾಡು ಗ್ರಾಮ ಸರ್ಕಾರಿ ಕಾಲೇಜು ಕಡೆ 16–08 ಗಂಟೆಗೆ ತಲುಪಿ ಅಲ್ಲಿ ಬೆಳ್ಳಾರೆಯಿಂದ ಸುಳ್ಯ ಕಡೆ ಬಂದ ರಿಕ್ಷಾವನ್ನು ನಿಲ್ಲಿಸಿ ಅದರಲ್ಲಿ 2 ರಟ್ಟಿನ ಬಾಕ್ಸುಗಳಲ್ಲಿ ಮದ್ಯ

ತುಂಬಿದ ಬಾಟಲಿಗಳನ್ನು ಪತ್ತೆಹಚ್ಚಿದ್ದರು ಆ ಸಂದರ್ಭ ತಾನು ಹಾಜರಿದ್ದೆ ಎಂದರೆ ಸರಿಯಲ್ಲ,ರಿಕ್ಷಾದಲ್ಲಿದ್ದ ಮದ್ಯದ ಬಾಟಲಿಗಳ ಬಗ್ಗೆ ಪಿಎಸ್ ಐ ರವರು ಚಾಲಕನಲ್ಲಿ ಪರವಾನಿಗೆ ದಾಖಲೆ ಪತ್ರ ಕೇಳಿದರು ಎಂದರೆ , ಚಾಲಕನಲ್ಲಿ ಯಾವುದೇ ದಾಖಲೆ ಇರಲಿಲ್ಲ ಎಂದರೆ , ರಿಕ್ಷಾದಲ್ಲಿ 2 ರಟ್ಟಿನ ಬಾಕ್ಸ್ ಗಳಲ್ಲಿ ಇದ್ದ ಎಲ್ಲಾ ಮದ್ಯದ ಬಾಟಲಿಗಳನ್ನು ಪಿಎಸ್‌ಐರವರು ಮಹಜರಿನಡಿ ಅಮಾನತುಪಡಿಸಿಕೊಂಡು ಮುಂದಿನ ಕ್ರಮದ ಬಗ್ಗೆ ವಿವರವಾದ ಮಹಜರು ಬರೆದು ಸ್ಥಳದಲ್ಲಿಯೇ ತನ್ನ ಸಹಿಯನ್ನು ನಿಪಿ–1 ಎ ಆಗಿ ಪಡಕೊಂಡರು ಎಂದರೆ , ವಾಹನ ಮಾಲೀಕರಿಗೆ ಅನುಕೂಲ ಆಗಲೆಂದು ತಾನು ಸುಳ್ಳು ಸಾಕ್ಷಿ ಹೇಳುತ್ತಿದ್ದೇನೆಂದರೆ ಸರಿಯಲ್ಲ ಎಂಬಿತ್ಯಾದಿ ಪಾಟೀ ಸವಾಲುಗಳಿಗೆ ಉತ್ತರಿಸಿರುತ್ತಾರೆ.

**ಪ್ರಾ.ಸಾ–2:–**

ಪ್ರಕರಣದ ತನಿಖಾದಿಕಾರಿಯಾದ ಶ್ರೀ.ಶಿವಪ್ರಸಾದ, ಅಬಕಾರಿ ನಿರೀಕ್ಷಕರು,ಪುತ್ತೂರು ವಲಯ ಇವರು ದಿ:28–7–2011ರಂದು ಪ್ರಾದಿಕಾರದ ಮುಂದೆ ಸಾಕ್ಷಿ ನೀಡುತ್ತಾ, ತಾನು ಜುಲಾಯಿ 2010ರಿಂದ ಅಬಕಾರಿ ನಿರೀಕ್ಷಕರಾಗಿ ಸುಳ್ಯ ವಲಯ ಇಲ್ಲಿ ಹೆಚ್ಚುವರಿ ಪ್ರಭಾರದಲ್ಲಿ ಕರ್ತವ್ಯ ನಿರ್ವಹಿಸುತ್ತಾ ಬಂದಿದ್ದು, ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದ.ಕ ಜಿಲ್ಲೆ ಮಂಗಳೂರು ಇವರ ಅದೇಶದಂತೆ ಪೊಲೀಸ್ ಉಪ ನಿರೀಕ್ಷಕರು,ಸುಳ್ಯ ಪೊಲೀಸ್ ಠಾಣೆ ಇವರ ಕ್ರೈಂ ಸಂ: 157/2010ರಲ್ಲಿ ವಶಪಡಿಸಿ ಕೊಳ್ಳಲಾದ ವಸ್ತುಗಳನ್ನು ದಿ:1–9–2010ರಂದು ಪಡಕೊಂಡಿರುತ್ತೇನೆ. ಮಾನ್ಯ ಅಧಿಕೃತ ಅಧಿಕಾರಿಗಳ ಅದೇಶವನ್ನು ನೋಡಿ ಅದು ನಿ.ಪಿ–2 ಎಂದು, ವಸ್ತುಗಳನ್ನು ಪಡೆದುಕೊಂಡ ಬಗ್ಗೆ ಅಧಿಕೃತ ಅದಿಕಾರಿಗಳಿಗೆ ವರದಿ ಸಲ್ಲಿಸಿರುತ್ತೇನೆ. ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನ ಸಂ: ಕೆ ಎ–21–4508 ಬಜಾಜ್ ಅಟೋರಿಕ್ಷಾ ಬಗ್ಗೆ ಪ್ರಾ.ಸಾ.ಅ ರಿಗೆ ಬಿ ವಹಿ ವರದಿ ಕೋರಿ ಹಾಗೂ ಮೌಲ್ಯ ಮಾಪನ ವರದಿ ಬಗ್ಗೆ ನಿವೇದಿಸಿಕೊಂಡಿರುತ್ತೇನೆ, ಸಾರಿಗೆ ಅಧಿಕಾರಿ, ಪುತ್ತೂರು ಇವರು ವಾಹನದ ಬಗ್ಗೆ ದಿ:6–10–2010 ರಂದು ಬಿ ವಹಿ ವರದಿ ನೀಡಿದ್ದು, ಅದು ನಿ.ಪಿ–3 ರಲ್ಲಿದೆ ಹಾಗೂ ಮೌಲ್ಯ ಮಾಪನ ವರದಿ ದಿ:19–10–2010 ರಂದು ನೀಡಿದ್ದು ಆ ವರದಿ ನಿ.ಪಿ–4 ಆಗಿರುತ್ತದೆ. ಅದನ್ನು ದೃಡೀಕರಿಸಿದ ಬಗ್ಗೆ ಸಹಿಯನ್ನು ನಿ.ಪಿ–4 ಎ ಎಂದು ಗುರುತಿಸಿರುತ್ತಾರೆ. ನಂತರ ಸುಳ್ಯ ಪೊಲೀಸ್ ಉಪ ನಿರೀಕ್ಷಕರಿಂದ ರಸಾಯನಿಕ ವಿಶ್ಲೇಷಣಾ ವರದಿ ಪಡೆದುಕೊಂಡು ವಶಪಡಿಸಿಕೊಂಡ ಎಲ್ಲಾ ಸೊತ್ತುಗಳನ್ನು ಮುಟ್ಟುಗೋಲು ಹಾಕಿಕೊಳ್ಳಬೇಕೆಂದು ಮಾನ್ಯ ಅಧಿಕೃತ ಅಧಿಕಾರಿಗೆ ಒಂದು ವರದಿಯನ್ನು ದಿ:30–11–2010ರಂದು ಸಲ್ಲಿಸಿದ್ದು, ಅದು ನಿ.ಪಿ–5 ಅಗಿದ್ದು, ತನ್ನ ಸಹಿ ನಿ.ಪಿ–5 ಎ ಎಂದು ಗುರುತಿಸಿ ಸಾಕ್ಷ್ಯ ನುಡಿದಿರುತ್ತಾರೆ.

ರಕ್ಷಣಾ ಪರ ವಕೀಲರು ಹಾಗೂ ವಾಹನದ ಮಾಲೀಕರು ಹಾಜರಾಗದೇ ಇರುವುದರಿಂದ ಪಾಟೀ ಸವಾಲು ಇಲ್ಲವೆಂದು ಪರಿಗಣಿಸಲಾಗಿರುತ್ತದೆ.

**ಪ್ರಾ.ಸಾ–3:–**

ಪ್ರಕರಣದ ಪಿರ್ಯಾಧುದಾರರಾದ ಶ್ರೀ.ಬಾಲಕೃಷ್ಣ ಶೆಟ್ಟಿ, ನಿವೃತ್ತ ಪೊಲೀಸ್ ಉಪ ನಿರೀಕ್ಷಕರು ಇವರು ದಿ:26–4–2012ರಂದು ಪ್ರಾದಿಕಾರದ ಮುಂದೆ ಸಾಕ್ಷಿ ನೀಡುತ್ತಾ , ತಾನು 2008ರಿಂದ 2010 ಫೆಬ್ರವರಿ ತನಕ ಸುಳ್ಯ ಪೊಲೀಸ್ ಠಾಣೆಯಲ್ಲಿ ಎಎಸ್ ಐ ಆಗಿ ಹಾಗೂ ಹೆಚ್ಚುವರಿಯಾಗಿ ಬೆಳ್ಳಾರೆ ಉಪ ಠಾಣೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದೆ. ದಿ:11–8–2010 ರಂದು ಬೆಳ್ಳಾರೆ ಉಪ ಠಾಣೆಯಲ್ಲಿ ಕರ್ತವ್ಯದಲ್ಲಿರುವಾಗ ಸಂಜೆ 4–15 ಗಂಟೆಗೆ ಸುಳ್ಯ ಪೊಲೀಸ್ ಠಾಣೆ ಎಸ್‌ಐ ಪ್ರವೀಣ ಜಿ ನೀಲಮ್ಮನವರು ದೂರವಾಣಿ ಕರೆ ಮಾಡಿ ಬೆಳ್ಳಾರೆಯಿಂದ ಸುಳ್ಯ ಕಡೆಗೆ ಬಜಾಜ್ ಅಟೋ ರಿಕ್ಷಾದಲ್ಲಿ ಅಕ್ರಮವಾಗಿ ಮದ್ಯವನ್ನು ಹೊಂದಿ ಸಾಗಾಟ ಮಾಡುತ್ತಿದ್ದಾರೆ . ನೀವು ಬೆಳ್ಳಾರೆಯಿಂದ ಸುಳ್ಯ ಕಡೆಗೆ ಬರಬೇಕೆಂದು ಹೇಳಿ ತಿಳಿಸಿರುತ್ತಾರೆ. ಆಗ ನಾನು ತಕ್ಷಣ ಪಿ.ಸಿ 417ರಾದ ಶ್ರೀ.ನೇತ್ರಕುಮಾರ ಇವರನ್ನು ಕರಕೊಂಡು ಇಲಾಖಾ ಮೋಟಾರ್ ಸೈಕಲ್‌ನಲ್ಲಿ ಬೆಳ್ಳಾರೆ ಹೊರಠಾಣೆಯಿಂದ ಸುಳ್ಯ ಕಡೆ ಹೊರಟೆವು. ಸಂಜೆ 4–30 ಗಂಟೆಗೆ ಸುಳ್ಯ ತಾಲೂಕು ಐವರ್ನಾಡು ಗ್ರಾಮದ ಬಳಿ ಬಂದಾಗ ಜೂನಿಯರ್ ಕಾಲೇಜು ಎದುರು ಒಂದು ಅಟೋ ರಿಕ್ಷಾ ಹೋಗುತ್ತಿರುವುದನ್ನು ಗಮನಿಸಿರುತ್ತೇನೆ, ಅದೇ ವೇಳೆಗೆ ಠಾಣಾ ಉಪ ನಿರೀಕ್ಷಕರು ಸಹ ಸಿಬ್ಬಂಧಿಗಳೊಂದಿಗೆ ಎದುರಿನಿಂದ ಬಂದಿದ್ದು ನಮ್ಮ ಮುಂದೆ ಹೋದ ರಿಕ್ಷವನ್ನು ನಿಲ್ಲಿಸಲು ಸೂಚಿಸಿರುತ್ತಾರೆ. ಅಟೋ ರಿಕ್ಷಾ ನಿಲ್ಲಿಸಿದಾಗ ನಾನು ಮತ್ತು ಪಿ.ಎಸ್.ಐ ರವರು ಚಾಲಕನನ್ನು ಸುತ್ತುವರಿದು ವಶಕ್ಕೆ ತೆಗೆದುಕೊಂಡಿದ್ದು ನಂತರ ರಿಕ್ಷಾ ತಪಾಸಣೆ ಮಾಡಿದಾಗ ಅದರಲ್ಲಿ 2 ರಟ್ಟಿನ ಪೆಟ್ಟಿಗೆಗಳು ಇದ್ದು,ಅದರಲ್ಲಿ ಏನಿದೆ ಎಂದು ವಿಚಾರಿಸಿದಾಗ ಚಾಲಕನು ಸಮರ್ಪಕ ಉತ್ತರ ನೀಡಿರುವುದಿಲ್ಲ. ಪಂಚರ ಸಮಕ್ಷಮ ಸದ್ರಿ ಪೆಟ್ಟಿಗೆಗಳನ್ನು ತೆಗೆದು ನೋಡಿದಾಗ ಸೋನಿ ಪೈನ್ ಲೇಬಲ್‌ಗಳಿದ್ದ 180 ಮಿಲಿಯ 45 ಬಾಟಲಿಗಳು ಮತ್ತು ಇನ್ನೊಂದರಲ್ಲಿ ಮೈಸೂರು ಲ್ಯಾನ್ಸರ್ ಎಂಬ ಲೇಬಲ್ ಇರುವ 180 ಎಂಎಲ್‌ನ 45 ಬಾಟಲಿಗಳು ಇರುವುದು ಕಂಡು ಬಂದು ಈ ಬಗ್ಗೆ ಚಾಲಕನನ್ನು ವಿಚಾರಿಸಿದಾಗ ಅವುಗಳನ್ನು ಯಾವುದೇ ಪರವಾನಿಗೆ ಇಲ್ಲದೇ ಮಾರಾಟ ಮಾಡಲು ಕೊಂಡುಹೋಗುತ್ತಿರುವುದಾಗಿ ತಿಳಿಸಿರುತ್ತಾರೆ. ಚಾಲಕನ ಹೆಸರು ಕೇಳಲಾಗಿ ಶಂಶುದ್ದೀನ್, ಬಿನ್:ಆಲಿ ಕುಂಜ್ಞಿ ಎಂದು ತಿಳಿಸಿದ್ದು ಅಕ್ರಮವಾಗಿ ಮದ್ಯ ಮಾರಾಟ ಅಪರಾಧ ಎಂದು ಅತನಿಗೆ ತಿಳಿಸಿ ಅತನನ್ನು ಪಿ.ಎಸ್.ಐ ರವರು ದಸ್ತಗಿರಿ ಮಾಡಿರುತ್ತಾರೆ. ರಿಕ್ಷಾ ಸಂ: ಕೆಎ–21–4508 ಅಗಿದ್ದು ಅದರ ಮಾಲೀಕರ ಬಗ್ಗೆ ವಿಚಾರಿಸಿದಾಗ ಚಾಲಕನು ಸಮರ್ಪಕವಾಗಿ ಉತ್ತರ ನೀಡಿರುವುದಿಲ್ಲ. ನಂತರ ಮದ್ಯ ಇರುವ ಪ್ರತಿ ರಟ್ಟಿನ ಪೆಟ್ಟಿಗೆಗಳಿಂದ ತಲಾ ಒಂದೊಂದು ಬಾಟಲಿಗಳನ್ನು ಮಾದರಿ ತೆಗೆದು ಸೀಲು ಮಾಡಿ ಅರೋಪಿತನ ಹೆಸರು ವಿಳಾಸ ಇರುವ ಚೀಟಿ ಅಂಟಿಸಲಾಗಿರುತ್ತದೆ. ಪಂಚರ ಸಮಕ್ಷಮ ಸೊತ್ತು ಸ್ವಾಧೀನತಾ ಮಹಜರು ತಯಾರಿಸಿ ರಿಕ್ಷಾ ಹಾಗೂ ಮದ್ಯವನ್ನು ವಶಪಡಿಸಿಕೊಂಡಿರುತ್ತೇನೆ. ಸದ್ರಿ ಸೊತ್ತು ಸ್ವಾಧೀನ ಮಹಜರನ್ನು ನಿ.ಪಿ.1 ಎಂದು ಈಗಾಗಲೇ ಗುರುತಿಸಲಾಗಿದ್ದು,

ಸಾಕ್ಷಿಯ ಸಹಿಯನ್ನು ನಿಶಾನೆ 1–ಬಿ ಎಂದು ಗುರುತಿಸಿ ಅರೋಪಿಯೊಂದಿಗೆ ವಶಪಡಿಸಿದ ರಿಕ್ಷಾ ಮತ್ತು ಮದ್ಯವನ್ನು ಮುಂದಿನ ಕ್ರಮಕ್ಕಾಗಿ ಸುಳ್ಯ ಠಾಣೆಗೆ ತಂದು ಪ್ರಕರಣ ದಾಖಲಿಸಿ ಉಪ ನಿರೀಕ್ಷಕರವರು ಮುಂದಿನ ಕ್ರಮ ಕೈಗೊಂಡಿ ರುತ್ತಾರೆ. ಪ್ರಕರಣದಲ್ಲಿ ವಶಪಡಿಸಿಕೊಂಡ ರಿಕ್ಷಾ ಹಾಗೂ ಮಾದರಿ ಸೀಸೆ ಮತ್ತು ಉಳಿದ ಮದ್ಯದ ಬಾಟಲಿಗಳನ್ನು ನೋಡಿದರೆ ಗುರುತಿಸುತ್ತೇನೆ ಎಂದು ಸಾಕ್ಷ್ಯ ನುಡಿದಿರುತ್ತಾರೆ.

ಎದುರುದಾರಾಗಲೀ, ಅವರ ಪರ ವಕೀಲರಾಗಲೀ ಹಾಜರಾಗದೇ ಇರುವುದರಿಂದ ಪಾಟೀ ಸವಾಲು ಇಲ್ಲವೆಂದು ಪರಿಗಣಿಸಲಾಗಿರುತ್ತದೆ.

ಪ್ರಕರಣದಲ್ಲಿ ಜಪ್ತುಪಡಿಸಿಕೊಂಡ ಮದ್ಯದ ಮಾದರಿಗಳನ್ನು ರಾಸಾಯನಿಕ ವಿಶ್ಲೇಷಣೆಗೆ ಒಳಪಡಿಸಲಾಗಿದ್ದು, ಕರ್ನಾಟಕ ಸರ್ಕಾರದ ಸಹಾಯಕ ರಾಸಾಯನಿಕ ವಿಶ್ಲೇಷಕರು ಮಂಗಳೂರು ವಲಯ ಇವರು ದಿ:26–8–2010ರಂದು ನೀಡಿರುವ ವಿಶ್ಲೇಷಣಾ ವರದಿಯಲ್ಲಿ ಮದ್ಯದಲ್ಲಿ ಮದ್ಯಸಾರ ಪ್ರಮಾಣ ಎಲ್ಲಾ ಮಾದರಿಗಳಲ್ಲೂ 42.0% ಇರುವುದಾಗಿ ದೃಢೀಕರಿಸಲ್ಪಟ್ಟಿರುವುದರಿಂದ ಜಪ್ತುಪಡಿಸಿಕೊಂಡ ವಸ್ತುವು ಅಬಕಾರಿ ಸೊತ್ತು (ಮದ್ಯ) ಆಗಿರುವುದು ಸಾಭೀತಾಗಿರುವುದರಿಂದ ಒಂದನೇ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ.

ಪ್ರಾಧಿಕಾರದ ನ್ಯಾಯಾಲಯದಲ್ಲಿ ಸ್ವತಂತ್ರ ಸಾಕ್ಷಿದಾರರೊಬ್ಬರನ್ನು ಪ್ರಾ.ಸಾ–1 ರವರನ್ನಾಗಿ ವಿಚಾರಣೆ ನಡೆಸಲಾಗಿ ಸದ್ರಿಯವರು ಅಭಿಯೋಗಕ್ಕೆ ಪ್ರತಿಕೂಲ ಸಾಕ್ಷಿ ನೀಡಿರುವವರಾದರೂ ಇಲಾಖಾ ಸಾಕ್ಷಿದಾರರಾದ ಪ್ರಾ.ಸಾ–2 ಮತ್ತು 3ರವರು ಪ್ರಕರಣ ಪತ್ತೆಹಚ್ಚಿದ ಬಗ್ಗೆ ಮತ್ತು ತನಿಖೆ ಕೈಗೊಂಡ ಬಗ್ಗೆ ಬಹಳ ಸ್ವಷ್ಟವಾಗಿ ಹಾಗೂ ತಮ್ಮ ಕರ್ತವ್ಯದ ನೆಲೆಯಲ್ಲಿ ಪ್ರಾಮಾಣಿಕವಾಗಿ ಸಾಕ್ಷಿ ನೀಡಿರುವುದರಿಂದ ಸದ್ರಿ ಸಾಕ್ಷಿದಾರರನ್ನು ಪಾಟೀ ಸವಾಲು ನಡೆಸಲು ರಕ್ಷಣಾ ಪರ ಯಾರೊಬ್ಬರೂ ಮುಂದಾಗದೇ ಇದ್ದುದರಿಂದ ವಾಹನದ ಮಾಲೀಕರು ತನ್ನ ನಿರಪರಾಧಿತ್ವವನ್ನು ಸಾಬೀತುಪಡಿಸಲು ವಿಫಲರಾಗಿರುತ್ತಾರೆ. ಕಾರಣ ಅಪರಾಧ ಸ್ಥಳದಲ್ಲಿ ಪಂಚರ ಸಮಕ್ಷಮ ಮಹಜರು ಜರುಗಿಸಿ ಸೊತ್ತುಗಳನ್ನು ಜಪ್ತುಪಡಿಸಿಕೊಂಡು ಪ್ರಕರಣ ದಾಖಲಿಸಿಕೊಂಡ ಅಂಶಗಳನ್ನು ಅವಲೋಕಿಸಿ ಅಟೋ ರಿಕ್ಷಾ ನೊಂದಣಿ ಸಂ: KA–21–4508ನ್ನು ಅಕ್ರಮ ಮದ್ಯ ಸಾಗಾಣಿಕೆಗೆ ಬಳಸಿರುವುದು ಸಾಭೀತಾಗಿರುವುದರಿಂದ ಎರಡನೇ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ.

ಇಂತಹ ಅಕ್ರಮ ಮದ್ಯ ಸಾಗಾಟ ತನ್ನ ತಿಳುವಳಿಕೆಗೆ ಬಾರದೇ ನಡೆದಿದೆ ಎಂಬುದನ್ನು ಸಾಕ್ಷ್ಯಾಧಾರಗಳೊಂದಿಗೆ ಸಾಭೀತುಪಡಿಸುವುದು ವಾಹನ ಮಾಲೀಕರ ಆದ್ಯ ಹೊಣೆಗಾರಿಕೆಯಾಗಿರುತ್ತದೆ. ವಾಹನ ಮಾಲೀಕರು ಪ್ರಾಧಿಕಾರದಿಂದ ನೀಡಲಾದ ಕಾರಣ ಕೇಳಿ ನೋಟಿಸಿಗೆ ಉತ್ತರಿಸುತ್ತಾ ಹೊರಿಸಲಾದ ಅಪರಾಧವನ್ನು ಅಲ್ಲಗಳೆದು, ಪ್ರಕರಣಕ್ಕೂ ವಾಹನಕ್ಕೂ ಯಾವುದೇ ಸಂಬಂಧವಿಲ್ಲವೆಂದು ತಿಳಿಸಿ ವಾಹನವನ್ನು ಶಾಶ್ವತವಾಗಿ ಬಿಡುಗಡೆಗೊಳಿಸಬೇಕೆಂದು ಕೋರಿ, ತದನಂತರದಲ್ಲಿ ವಾಹನವನ್ನು ಮಧ್ಯಂತರ ಬಿಡುಗಡೆಗಾಗಿ ತಮ್ಮ ವಕೀಲರ ಮೂಲಕ ಅಬಕಾರಿ ಕಾಯಿದೆ ಕಲಂ 43 ಎ ರಡಿಯಲ್ಲಿ ಅರ್ಜಿಯನ್ನು ಸಲ್ಲಿಸಿದ್ದು, ಸದ್ರಿ ಅರ್ಜಿಯನ್ನು ಪರಿಗಣಿಸಿ ಬ್ಯಾಂಕ್ ಗ್ಯಾರೆಂಟಿ ಭದ್ರತೆಯಡಿ ಯಲ್ಲಿ ಪ್ರಾಧಿಕಾರದಿಂದ ಮದ್ಯಂತರ ಬಿಡುಗಡೆ ಅದೇಶ ಹೊರಡಿಸಲಾಗಿದ್ದರೂ ವಾಹನದ ಮಾಲೀಕರು ಈ ಬಗ್ಗೆ ಯಾವುದೇ ಪ್ರತಿಕ್ರಿಯೆ ತೋರಿಸದೇ ವಾಹನವನ್ನು ಮದ್ಯಂತರ ಬಿಡುಗಡೆ ಪಡೆಯಲು ವಿಫಲರಾಗಿರುತ್ತಾರೆ. ಅಲ್ಲದೇ ಪ್ರಾದಿಕಾರದ ಮುಟ್ಟುಗೋಲು ವಿಚಾರಣೆ ಸಂದರ್ಭದಲ್ಲಿ ನಿರಂತರ ನೋಟಿಸುಗಳನ್ನು ನೀಡಲಾಗಿದ್ದರೂ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ನಿರಾಪರಾಧಿತ್ವವನ್ನು ಸಾಭೀತುಪಡಿಸಲು ವಿಫಲರಾಗಿರುತ್ತಾರೆ ಹಾಗೂ ರಕ್ಷಣಾ ಪರ ವಕೀಲರು ಕೂಡಾ ಈ ಪ್ರಕರಣದಲ್ಲಿ ತಮ್ಮ ನಿವೃತ್ತಿಯನ್ನು ಘೋಷಿಸಿರುತ್ತಾರೆ.

ಕಾರಣ ವಾಹನದ ಮಾಲೀಕರು ಈ ಪ್ರಾಧಿಕಾರದ ಮುಂದೆ ಸಾಕ್ಷ್ಯಾಧಾರಗಳೊಂದಿಗೆ ಹಾಜರಾಗಿ ವಾಹನವನ್ನು ತನ್ನ ತಿಳುವಳಿಕೆಗೆ ಬಾರದೇ ಅಕ್ರಮ ಮದ್ಯ ಸಾಗಾಣಿಕೆಗೆ ಉಪಯೋಗಿಸಲಾಗಿದೆ ಎಂಬ ಅಂಶವನ್ನು ಕರ್ನಾಟಕ ಅಬಕಾರಿ ಕಾಯಿದೆ ಕಲಂ 43 ಬಿ ಅಡಿಯಲ್ಲಿ ರುಜುವಾತು ಪಡಿಸಲು ವಿಫಲರಾಗಿರುವುದರಿಂದ ವಾಹನವನ್ನು ಅಕ್ರಮ ಮದ್ಯ ಸಾಗಾಣಿಕೆಗೆ ವಾಹನದ ಮಾಲೀಕರು ಬಳಸಿರುವುದು ನಿಸ್ಸಂದೇಹವಾಗಿ ಪ್ರಾಧಿಕಾರವು ಮನಗಂಡು ಮೂರನೇಯ ಅಂಶವನ್ನು ನಕಾರಾತ್ಮಕವಾಗಿ ಪರಿಗಣಿಸಿದೆ.

ಈ ಮೇಲಿನ ಎಲ್ಲಾ ಕಾರಣಗಳಿಂದ ಮಹಜರು ಸಾಕ್ಷಿಗಳ ವಿಚಾರಣೆ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ಹಾಗೂ ವಾಹನದಲ್ಲಿ ಜಪ್ತುಪಡಿಸಿದ ಮದ್ಯದಲ್ಲಿ ಮದ್ಯಸಾರದ ಅಂಶ ಇರುವುದು ವಿಶ್ಲೇಷಣಾ ವರದಿಯಿಂದ ದೃಡಪಟ್ಟಿರುವುದರಿಂದ ಈ ಪ್ರಕರಣದಲ್ಲಿ ಜಪ್ತು ಪಡಿಸಲಾಗಿರುವ ಅಟೋ ರಿಕ್ಷಾ ನೊಂದಣಿ ಸಂ: KA–21–4508ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವೆಂದು ಪ್ರಾಧಿಕಾರವು ತೀರ್ಮಾನಿಸಿ, ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

ಬಿ.ವಿ.ಹೂವಪ್ಪ ಗೌಡ, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,ದ.ಕ.ಜಿಲ್ಲೆ,ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43ಎ ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ, ನಿಯಮ 43 ಬಿ ರಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಪೊಲೀಸ್ ಉಪ ನಿರೀಕ್ಷಕರು, ಸುಳ್ಯ ಪೊಲೀಸ್ ಠಾಣಾ ಕ್ರೈಂ ಸಂ:0157/2010, ದಿ:11–8–2010ರಲ್ಲಿ ಜಪ್ತು ಪಡಿಸಿರುವ ಅಟೋ ರಿಕ್ಷಾ ನೊಂದಣಿ ಸಂ: KA–21–4508 (ಚಾಸೀಸ್ ನಂ: 24FBGE27708 ಮತ್ತು ಇಂಜಿನ್ ನಂ:AEMBGE53887)ನ್ನು ನಿಯಮ 43ಎ (2)ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಕೊಂಡು ಆದೇಶ ನೀಡಿರುತ್ತೇನೆ.

ಸದ್ರಿ ಪ್ರಕರಣದಲ್ಲಿ ಜಪ್ತುಪಡಿಸಲಾದ ಮದ್ಯವನ್ನು ಈ ಪ್ರಾದಿಕಾರದ ಸಮ ಸಂಖ್ಯೆ ಅದೇಶ ದಿನಾಂಕ:11–2–2011ರ ಅನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುವುದನ್ನು ಸ್ದಿರೀಕರಿಸಿದ್ದೇನೆ.

ಈ ಆದೇಶವನ್ನು ದಿನಾಂಕ:10–05–2012ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜ್ಯಾರಿಯಲ್ಲಿ ಬರುತ್ತದೆ.

**ಬಿ.ವಿ. ಹೂವಪ್ಪಗೌಡ,**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು

**ಅನುಬಂಧ–I**

**ಪಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ :–**

**ಪ್ರಾಸಾ– I** : ಶ್ರೀ ಪಾರ್ತಿವನ್, ಬಿನ್: ದಿ: ಕೃಷ್ಣಸ್ವಾಮಿ, ಅಡ್ಯಡ್ಕ, ಸಿ.ಆರ್.ಸಿ. ಕಾಲೋನಿ, ತೋಡಿಕಾನ, ಸುಳ್ಯ ತಾಲ್ಲೂಕು (ಸ್ವತಂತ್ರ ಸಾಕ್ಷಿದಾರರು)

**ಪ್ರಾಸಾ– 2** : ಶ್ರೀ ಶಿವಪ್ರಸಾದ್, ಅಬಕಾರಿ ನಿರೀಕ್ಷಕರು, ಪುತ್ತೂರು ವಲಯ

**ಪ್ರಾಸಾ– 3** : ಶ್ರೀ ಬಾಲಕೃಷ್ಣ ಶೆಟ್ಟಿ, ಬಿನ್: ಉಗಪ್ಪ ಶೆಟ್ಟಿ, ನಿವೃತ್ತ ಮೊ.ಉ.ನಿ

**ಅನುಬಂಧ–II**

**ಪಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು :–**

**ನಿಶಾನೆ ಪಿ– I :** ಮಹಜರು ಮತ್ತು ನಿಶಾನೆ ಪಿ–1 & ಬಿ : ಸಾಕ್ಷಿಗಳ ಸಹಿ

**ನಿಶಾನೆ ಪಿ– 2 :** ಅಧಿಕೃತ ಅಧಿಕಾರಿಗಳ ದಿ: 17–08–2010ರ ಆದೇಶ

**ನಿಶಾನೆ ಪಿ– 3 :** ಬಿ ಎಕ್ಸ್‌ಟ್ರಾಕ್ಟ್ ವರದಿ

**ನಿಶಾನೆ ಪಿ– 4 :** ಮೌಲ್ಯಮಾಪನ ವರದಿ ಮತ್ತು ನಿಶಾನೆ ಪಿ–4ಎ : ಸಾಕ್ಷಿ ಸಹಿ

**ನಿಶಾನೆ ಪಿ– 5 :** ತನಿಖಾ ವರದಿ ದಿ: 30–11–2010 ಮತ್ತು ನಿಶಾನೆ ಪಿ–5ಎ : ಸಾಕ್ಷಿ ಸಹಿ

**ಅನುಬಂಧ–III**

**ವಾಹನ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು :–**

–ಇಲ್ಲ–

**ಅನುಬಂಧ–IV**

**ವಾಹನ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು :–**

–ಯಾವುದು ಇರುವುದಿಲ್ಲ–

**ಬಿ.ವಿ. ಹೂವಪ್ಪಗೌಡ,**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು

**ಪಿ.ಆರ್. 177**

**ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ,**
**ಬಹುಮಹಡಿ ಕಟ್ಟಡ, ಬೆಂಗಳೂರು**

**ಸಂಖ್ಯೆ:ಆಸಾಂನಿ/58/ಆಡಳಿತ–3/10–11/5389–94, ಬೆಂಗಳೂರು–1, ದಿನಾಂಕ 18.05.2012.**

**ವಿಷಯ:** ಶ್ರೀ ಶ್ರೀಶೈಲ ಬಿ. ತಳವಾರ, ಹಿಂದಿನ ಸಾಂಖ್ಯಿಕ ನಿರೀಕ್ಷಕರು, ತಾಲ್ಲೂಕು ಕಛೇರಿ, ಜೇವರ್ಗಿ (ಗುಲಬಾರ್ಗ ಜಿಲ್ಲೆ) ಪ್ರಸ್ತುತ ಪ್ರಗತಿ ಸಹಾಯಕರು, ತಾಲ್ಲೂಕು ಪಂಚಾಯತಿ, ಗುಲಬರ್ಗಾ, ಇವರ ವಿರುದ್ಧದ ಇಲಾಖಾ ವಿಚಾರಣೆಗೆ ಸಂಬಂಧಿಸಿದಂತೆ ಅಂತಿಮ ಆದೇಶ ಹೊರಡಿಸುವುದರ ಕುರಿತು.

**ಉಲ್ಲೇಖ:** 1. ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು:1957ರ ನಿಯಮ:11ರ ಅನ್ವಯ, ಶ್ರೀ ಶೈಲ್ ಬಿ. ತಳವಾರ, ಹಿಂದಿನ ಸಾಂಖ್ಯಿಕ ನಿರೀಕ್ಷಕರು, ಇವರಿಗೆ ಹೊರಡಿಸಲಾದ ಇದೇ ಕ್ರಮಾಂಕದ ಕಾರಣ ಕೇಳುವ ಜ್ಞಾಪನದ ದಿನಾಂಕ: 15.04.2011.

2. ಶ್ರೀ ಶೈಲ್ ಬಿ. ತಳವಾರ, ಹಿಂದಿನ ಸಾಂಖ್ಯಿಕ ನಿರೀಕ್ಷಕರು, ಇವರು ಇವರ ಲಿಖಿತ ವಿವರಣೆ ದಿನಾಂಕ: 29.04.2011 (ಜಿಲ್ಲಾ ಸಾಂಖ್ಯಿಕ ಅಧಿಕಾರಿಗಳು, ಗುಲಬಾರ್ಗ, ಇವರ ಪತ್ರದ ಸಂಖ್ಯೆ: ಜಿಸಾಗು/ಆಡಳಿತ/ಶಿಕ್ರ/49/2010–11/588, ದಿನಾಂಕ: 02.05.2011 ರೊಂದಿಗೆ ಸಲ್ಲಿಸಿದ್ದು).

3. ಈ ನಿರ್ದೇಶನಾಲಯದ ಇದೇ ಕ್ರಮಾಂಕದ ಆದೇಶದ ದಿನಾಂಕ: 29.09.2011.

4. ಈ ನಿರ್ದೇಶನಾಲಯದ ಇದೇ ಕ್ರಮಾಂಕದ 2ನೇ ಕಾರಣ ಕೇಳುವ ಜ್ಞಾಪನ ದಿನಾಂಕ: 19.01.2012.

**ಪ್ರಸ್ತಾವನೆ:**

ಈ ನಿರ್ದೇಶನಾಲಯದ ಸಾಂಖ್ಯಿಕ ನಿರೀಕ್ಷಕರ ವೃಂದವರಾದ ಶ್ರೀ ಶ್ರೀಶೈಲ ಬಿ. ತಳವಾರ, ಇವರು 2010ನೇ ಸಾಲಿನಲ್ಲಿ ತಾಲ್ಲೂಕು ಕಛೇರಿ, ಜೇವರ್ಗಿ, ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಕರ್ತವ್ಯ ಲೋಪ, ಕರ್ನಾಟಕ ನಾಗರಿಕ ಸೇವಾ (ನಡತೆ) ನಿಯಮಗಳು 1966ರ ನಿಯಮ:3ರ ಉಲ್ಲಂಘನೆ, ಸರ್ಕಾರದ ಹಣಕಾಸಿನ ದುರಪಯೋಗ, ಇತ್ಯಾಧಿ 5–ಅಪಾದನೆಗಳನ್ನು ಒಳಗೊಂಡಂತೆ, ಉಲ್ಲೇಖ (1)ರಲ್ಲಿನ ಕಾರಣ ಕೇಳುವ ಜ್ಞಾಪನವನ್ನು ಅವರಿಗೆ ಹೊರಡಿಸಲಾಗಿತ್ತು.

ಶ್ರೀ ಶ್ರೀ ಶೈಲ ಬಿ. ತಳವಾರ, ಹಿಂದಿನ ಸಾಂಖ್ಯಿಕ ನಿರೀಕ್ಷಕರು, ಉಲ್ಲೇಖ (2)ರಲ್ಲಿನ ಅವರ ಲಿಖಿತ ವಿವರಣೆಯಲ್ಲಿ ಇನ್ನಿತರ ವಿಷಯಗಳೊಂದಿಗೆ ಅವರ ವಿರುದ್ಧದ ಆರೋಪಗಳನ್ನು ಸ್ಪಷ್ಟವಾಗಿ ನಿರಾಕರಿಸಿದ್ದರು.

ಶ್ರೀ ಶ್ರೀಶೈಲ ಬಿ. ತಳವಾರ, ಸಾಂಖ್ಯಿಕ ನಿರೀಕ್ಷಕರ ವೃಂದವಾರ ಇವರು 23.06.2001 ರಂದು ಗಣತಿದಾರರಾಗಿ ಅನುಕಂಪದ ಆಧಾರದ ಮೇಲೆ ನೇಮಕಾತಿಗೊಂಡಿದ್ದು, ನಂತರ ಸಾಂಖ್ಯಿಕ ನಿರೀಕ್ಷಕರಾಗಿ ಬಡ್ತಿ ಹೊಂದಿದ್ದು, ಕೇವಲ 10–ವರ್ಷಗಳಷ್ಟು ಸೇವೆಯನ್ನು ಸಲ್ಲಿಸಿರುವ ಇವರು, ಅವರ ವಿರುದ್ಧದ ಆರೋಪಗಳಿಂದ ರಕ್ಷಿಸಿಗೊಳ್ಳಬಹುದಾದ ವಿವರಣೆ ಅಥವಾ ದಾಖಲಾತಿಗಳನ್ನು ಸಲ್ಲಿಸುವುದರ ಬದಲಾಗಿ, 1ನೇ ಆರೋಪಕ್ಕೆ ಸಂಬಂಧಿಸಿದ ಅವರ ಲಿಖಿತ ವಿವರಣೆಯಲ್ಲಿ **"ನಾನು ತಹಶಿಲ್ದಾರರ ಕಛೇರಿಗೆ ಬಂದಂತಹ ನಮೂನೆಗಳನ್ನು ಪರಿಶೀಲಸಿ ಜಿಲ್ಲಾ ಮಟ್ಟದ ಅಧಿಕಾರಿಗಳಿಗೆ ಸಲ್ಲಿಸುವುದು ಮಾತ್ರ ನನ್ನ ಕೆಲಸವಾಗಿದೆ ಹಾಗೂ ಇದಕ್ಕೆ ಜಿಲ್ಲಾ ಮಟ್ಟದ ಅಧಿಕಾರಿಗಳೇ ಹೊಣೆಗಾರರಾಗಿರುತ್ತಾರೆ" ಎಂದು "ಜಿಲ್ಲಾ ಮಟ್ಟದ ಅಧಿಕಾರಿಗಳ ವಿರುದ್ಧ" (ಅಂದರೆ ನೇರವಾಗಿ ಜಿಲ್ಲಾ ಸಾಂಖ್ಯಿಕ ಅಧಿಕಾರಿಗಳ ಹಾಗೂ ಜಿಲ್ಲಾ ಮಟ್ಟದ ಸಂಬಂಧಿಸದ ಇತರೆ ಇಲಾಖೆಯ ಅಧಿಕಾರಿಗಳ ವಿರುದ್ಧ) ಆರೋಪ ಮಾಡಿದ್ದನ್ನು, 4ನೇ ಆರೋಪಕ್ಕೆ ಸಂಬಂಧಿಸಿದಂತೆ ಆರೋಪಿತ ಈ ಸರ್ಕಾರಿ ನೌಕರರು ಸಲ್ಲಿಸಿದ ವಿವರಣೆಯಲ್ಲಿ"** ಬೆಳೆ ಕಟಾವು ಪ್ರಯೋಗಗಳಿಗೆ ಸಂಬಂಧಿಸಿದಂತೆ ಕ್ಷೇತ್ರ ಮಟ್ಟದಲ್ಲಿ ನಿಯಾನುಸಾರವಾಗಿ ಕಾರ್ಯ ನಿರ್ವಹಿಸಿದ್ದೇನೆ. ನಿಗದಿತ ಅವಧಿಯ ಒಳಗೆ ಸದರಿ ನಮೂನೆಗಳನ್ನು ಜಿಲ್ಲೆಗೆ ಸಲ್ಲಿಸಿದ್ದೇನೆ. ಜಿಲ್ಲೆಯಲ್ಲಿ ಕ್ರೋಢಿಕೃತ ವರದಿ ಸಲ್ಲಿಸುವಲ್ಲಿ ವಿಳಂಬವಾಗಿರುವುದಕ್ಕೆ **"ಜಿಲ್ಲಾ ಮಟ್ಟದ ಅಧಿಕಾರಿಗಳೆ ಕಾರಣ"** ಎಂದು ಜಿಲ್ಲಾ ಮಟ್ಟದ ಅಧಿಕಾರಿಗಳ ವಿರುದ್ಧ ನೇರವಾಗಿ ಆರೋಪ ಮಾಡಿದ್ದನ್ನು ಪರಿಶೀಲಿಸಲಾಗಿ, ಸಮೂಹ "ಸಿ" ವೃಂದದ ಸರ್ಕಾರಿ ನೌಕರರೊಬ್ಬರಿಗೆ ಸಲ್ಲದ ವರ್ತನೆ ಎಂದು ಮೇಲ್ನೋಟಕ್ಕೆ ಸಾಬೀತಾಗುತ್ತದೆಯಾದ್ದರಿಂದ, ಹಾಗೂ, ಅವರ ವಿರುದ್ಧದ 5ನೇ ಆರೋಪದಲ್ಲಿ ಸಾರ್ವಜನಿಕರಿಂದ ಸ್ವೀಕೃತಿಯಾದ ಸರ್ಕಾರದ ಹಣವನ್ನು ದುರುಪಯೋಗಪಡಿಸಿಕೊಂಡಿರುವುದಾಗಿದ್ದು, ಈ 5–ಆರೋಪಕ್ಕೆ ಸಂಬಂಧಿಸಿದಂತೆ, ಅವರ ವಿವರಣೆಯಲ್ಲಿ "ಏಪ್ರಿಲ್–2008 ರಿಂದ ಏಪ್ರಿಲ್ 2009ರವರೆಗೆ ಹಾಗೂ ಮೇ–2009ರಿಂದ 2010ರವರೆಗೆ (749+497) ಸ್ವೀಕೃತಿಯಾದ ಹಣವನ್ನು ಅನುಕ್ರಮವಾಗಿ ದಿನಾಂಕ: 04.11.2010 ರಂದು ಹಾಗೂ 20.11.2010 ರಂದು ಸರ್ಕಾರಕ್ಕೆ ಜಮಾ ಮಾಡಿರುವುದಾಗಿ ಬ್ಯಾಂಕ್ ಚಲನಗಳ ಝೆರಾಕ್ಸ ಪ್ರತಿಗಳನ್ನು ಸಲ್ಲಿಸಿ, ಅವರನ್ನು ಸಮರ್ಥಿಸಿಕೊಂಡಿರುತ್ತಾರೆ.

ಆದರೆ, ಕರ್ನಾಟಕ ಅರ್ಥಿಕ ಸಂಹಿತೆ, 1958ರ ಅನುಚ್ಛೇದ 4(ಎ)ರನ್ವಯ "ಸರ್ಕಾರಿ ನೌಕರನು ತನ್ನ ಸ್ವರೂಪದಲ್ಲಿ ಭಾಗಿಯಾಗಿರುವ ಎಲ್ಲಾ ಹಣಕಾಸಿನ ವಹಿವಾಟುಗಳನ್ನು, ಯಾವುದನ್ನು ಬಿಡದೆ, ಲೆಕ್ಕಕ್ಕೆ ತರಬೇಕು ಮತ್ತು ಸ್ವೀಕರಿಸಿದ ಎಲ್ಲಾ ಹಣವನ್ನು ಯಾವ ಸಂದರ್ಭದಲ್ಲಿಯೂ ಅನಾವಶ್ಯಕ ವಿಳಂಬವಿಲ್ಲದೆ **ಎರಡು ದಿನಗಳೊಳಗಾಗಿ,** ಸಮಚಿತ ಲೆಕ್ಕಕ್ಕೆ ಜಮೆ ಮಾಡುವುದುಕ್ಕಾಗಿ ಮತ್ತು ಖಜಾನೆಯ ಸಾಮಾನ್ಯ ಶಿಲ್ಕಿನ ಭಾಗವಾಗುವುದಕ್ಕಾಗಿ,

ಸರ್ಕಾರಿ ಖಜಾನೆಗೆ ಸಂದಾಯ ಮಾಡತಕ್ಕದ್ದು" ಎಂದಿರುತ್ತದೆ. ಆಪಾದಿತ ಸರ್ಕಾರಿ ನೌಕರರಾದ ಶ್ರೀ ಶ್ರೀಶೈಲ ಬಿ. ತಳವಾರ, ಇವರು ಅವರ ವಿವರಣೆಯಲ್ಲಿ ಸರ್ಕಾರಿ ಹಣವನ್ನು ಖಾಜಾನೆಗೆ ಜಮಾ ಮಾಡಿರುವುದಾಗಿ ಸಮರ್ಥಿಸಿಕೊಂಡಿದ್ದರೂ, ಅತೀ ವಿಳಂಬವಾಗಿ ಜಮಾ ಮಾಡಿದ್ದರಿಂದ, ಸರ್ಕಾರದ ಹಣವನ್ನು ತಾತ್ಕಾಲಿಕ ದುರುಪಯೋಗ ಪಡಿಸಿಕೊಂಡಿರುವುದು (temporary misappropriation of Government Money) ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ.

ಮೇಲಿನ ಕಂಡಿಕೆಯಲ್ಲಿ ವಿವರಿಸಿದಂತೆ, ಶ್ರೀ ಶ್ರೀಶೈಲ ಬಿ. ತಳವಾರ, ಹಿಂದಿನ ಸಾಂಖ್ಯಿಕ ನಿರೀಕ್ಷಕರು ಇವರು ಅವರ ವಿರುದ್ಧದ ಆರೋಪಗಳಿಗೆ ಸಂಬಂಧಿಸಿದಂತೆ ಸಿಮಿತವಾಗಿ ಅಥವಾ ಅವರನ್ನು ರಕ್ಷಿಸಿಕೊಳ್ಳಬಹುದಾದ ಲಿಖಿತ ವಿವರಣೆ ಸಲ್ಲಿಸುವುದರ ಬದಲಾಗಿ ಜಿಲ್ಲಾ ಮಟ್ಟದ ಅಧಿಕಾರಿಗಳ ವಿರುದ್ಧ ಆರೋಪ ಮಾಡಿದ್ದನ್ನು ಹಾಗೂ, ಸರ್ಕಾರದ ಹಣವನ್ನು ತಾತ್ಕಾಲಿಕವಾಗಿ ದುರುಪಯೋಗ ಪಡಿಸಿಕೊಂಡಿರುವುದು ಮೇಲ್ನೋಟಕ್ಕೆ ಸಾಬೀತಾಗಿದ್ದರಿಂದ, ಅವರ ವಿರುದ್ಧ ಹೊರಿಸಲಾದ ಎಲ್ಲಾ ಆರೋಪಗಳನ್ನು ನಿರಾಕರಿಸಿದ್ದರಿಂದ, ಇವರ ವಿರುದ್ಧ ಹೊರಿಸಲಾದ ಆರೋಪಗಳ ಸತ್ಯಾ ಸತ್ಯಾತೆಯನ್ನು ಕಂಡುಕೊಳ್ಳಲು ಇಲಾಖಾ ವಿಚಾರಣೆ ಏರ್ಪಡಿಸಲು ನಿರ್ಧರಿಸಿ, ಈ ನಿರ್ದೇಶನಾಲಯದ ಆದೇಶ ಸಂಖ್ಯೆ: ಆಡಳಿತ/398/2011–12, ದಿನಾಂಕ: 29.09.2011ರಲ್ಲಿ ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ:11 (5)ನ್ನು ಓದುವುದುರೊಂದಿಗೆ ಅದೇ ನಿಯಮದ ಉಪ ನಿಯಮ (2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಕೆ.ಸಿ. ಸಾಲಾಪೂರ, ಜಂಟಿ ನಿರ್ದೇಶಕರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಅದೇ ನಿಯಮಗಳ ಉಪನಿಯಮ (5) (ಸಿ)ರ ಅನ್ವಯ, ಶಿಸ್ತು ಪ್ರಾಧಿಕಾರದ ಪರವಾಗಿ ಈ ಪ್ರಕರಣವನ್ನು ಮಂಡಿಸಲು ಶ್ರೀ ವಿ.ಕೆ. ಬಾಕದ್ರಾ, ಪತ್ರಾಂಕಿತ ವ್ಯವಸ್ಥಾಪಕರು, ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಲಾಗಿತ್ತು.

ವಿಚಾರಣಾಧಿಕಾರಿಗಳು ದಿನಾಂಕ: 29.12.2011ರಂದು ಸಲ್ಲಿಸಿರುವ ವಿಚಾರಣಾ ವರದಿಯಲ್ಲಿ ಆಪಾದಿತ ಸರ್ಕಾರಿ ನೌಕರರಾದ ಶ್ರೀ ಶ್ರೀಶೈಲ ಬಿ. ತಳವಾರ, ಇವರ ವಿರುದ್ಧದ 5–ಆರೋಪಗಳಲ್ಲಿ 1 ರಿಂದ 4ರಲ್ಲಿನ ಆರೋಪಗಳು ರುಜುವಾತಾಗಿಲ್ಲವೆಂದು ಅಭಿಪ್ರಾಯ ಪಟ್ಟಿದ್ದರೂ, ಈ ಸರ್ಕಾರಿ ನೌಕಕರು ಸರ್ಕಾರದ ಹಣವನ್ನು ತಾತ್ಕಾಲಿಕವಾಗಿ ದುರುಪಯೋಗಿಸಿಕೊಂಡು ಕರ್ನಾಟಕ ಆರ್ಥಿಕ ಸಂಹಿತೆ 1958ರ ಅನುಚ್ಛೇದ–4 (ಎ)ರ ಸರ್ಕಾರದ ಹಣವನ್ನು ತಾತ್ಕಾಲಿಕವಾಗಿ ದುರುಪಯೋಗಪಡಿಸಿಕೊಂಡಿದ್ದು, ಸಾಬೀತಾಗಿದೆ ಎಂದು ಅಭಿಪ್ರಾಯ ನೀಡಿ, ಅವರ ನಡತೆಯು ಕರ್ನಾಟಕ ನಾಗರಿಕ ಸೇವಾ (ನಡತೆ) ನಿಯಮಗಳಿಗೆ ವಿರುದ್ಧವಾಗಿರುತ್ತದೆ ಎಂದು ನಿರ್ಣಯಿಸಿರುತ್ತಾರೆ.

ಈ ನಿರ್ದೇಶನಾಲಯದ ದಿನಾಂಕ: 19.01.2012ರ 2ನೇ **ಕಾರಣ ಕೇಳುವ ಜ್ಞಾಪನದೊಂದಿಗೆ,** ವಿಚಾರಣಾ ವರದಿಯನ್ನು ಆರೋಪಿತ ಸರ್ಕಾರಿ ನೌಕರರಿಗೆ ಒದಗಿಸಿ, ಅವರ ಲಿಖಿತ ವಿವರಣೆಯನ್ನು 10–ದಿನಗಳ ಒಳಗಾಗಿ ಸಲ್ಲಿಸತಕ್ಕದ್ದೆಂದು ಸೂಚಿಸಲಾಗಿತ್ತಾದರೂ, ದಿನಾಂಕ: 28.03.2012ರಂದು (ಅಂದರೆ 2–ತಿಂಗಳುಗಳ ನಂತರ ಸಲ್ಲಿಸಿದ ಅವರ ವಿವರಣೆಯನ್ನು ತಿರಸ್ಕರಿಸಬಹುದಾಗಿತ್ತಾದರೂ) ಸಲ್ಲಿಸಿದ ಅವರ ವಿವರಣೆಯನ್ನು ಪರಿಶೀಲಿಸಲಾಗಿ, ಅದನ್ನು ಪರಿಗಣಿಸಲು ಸೂಕ್ತವೆಂದು ಕಂಡು ಬರುತ್ತದೆಯಾದ್ದರಿಂದ, ಅದನ್ನು ತಿರಸ್ಕರಿಸುವುದರೊಂದಿಗೆ, ಒಟ್ಟಾರೆ, ಪ್ರಸ್ತುತ ಇಲಾಖಾ ವಿಚಾರಣೆಗೆ ಪೂರಕವಾಗಿ ಸಲ್ಲಿಸಲಾಗಿದ್ದ ಅವರ ವಿವರಣೆಯನ್ನು ಪರಿಶೀಲಿಸಲಾಗಿ, ಅವರ ಮೇಲಿನ ಆರೋಪಗಳಿಂದ ಅವರನ್ನು ರಕ್ಷಿಸಿಕೊಳ್ಳುವುದರ ಬದಲಾಗಿ ಮೇಲಧಿಕಾರಿಗಳನ್ನು ನಿಂದಿಸುವ ಅಥವಾ ಜವಾಬ್ದಾರರನ್ನಾಗಿ ಮಾಡುವಂಥಹ ಮನವಿಗಳನ್ನು ಸಲ್ಲಿಸಿ **"ಸ್ವಯಂ ಕೃತ ಅಪರಾಧವನ್ನು"** (self-created) ಎಸಗಿ, ಸ್ವತ: ಅವರೇ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸುವಂಥಹ ಪರಿಸ್ಥಿತಿಯನ್ನು ಸೃಷ್ಟಿಸಿಕೊಂಡಿರುತ್ತಾರೆ. ಆಪಾದಿತ ಸರ್ಕಾರಿ ನೌಕಕರಾದ ಶ್ರೀ ಶ್ರೀಶೈಲ ಬಿ.ತಳವಾರ, ಅವರಿಗೆ ವಹಿಸಲಾದ ಸರ್ಕಾರ ಕರ್ತವ್ಯಗಳನ್ನು ಮತ್ತು ಜವಾಬ್ದಾರಿಗಳನ್ನು ನಿರ್ವಹಿಸುವುದರ ಬದಲಾಗಿ, ಕಚೇರಿ ಮುಖ್ಯಸ್ಥರ ವಿರುದ್ಧ ಆಪಾದನೆ ಮಾಡಿದ್ದನ್ನು ಪರಿಶೀಲಿಸಲಾಗಿ, ಹಾಗೂ ಅವರ ವಿರುದ್ಧದ ಸರ್ಕಾರದ ಹಣದ ಆರೋಪಗಳ ನಿಸ್ಸಂಶವಾಗಿ ಸಾಬೀತಾಗಿದ್ದರಿಂದ, ಅವರಿಗೆ ಕಠಿಣ ದಂಡನೆ ವಿಧಿಸಬಹುದಾಗಿತ್ತಾದರೂ, ಅವರ ಸರ್ಕಾರದ ವೃತ್ತಿ ಜೀವನ ಜೀವನಾಧಾರ ಮತ್ತು ಅವರನ್ನೇ ಅವಲಂಬಿಸಿದ (his dependent family members) ಕುಟುಂಬದ ಸದಸ್ಯರ ಜೀವನೋಪಾಯವನ್ನು ಮೊಟಕುಗೊಳಿಸುವುದರ ಬದಲಾಗಿ, ಅವರ ನಡವಳಿಕೆಯಲ್ಲಿ ಸುಧಾರಿಸುವಂತೆ ಎಚ್ಚರಿಕೆ ನೀಡಿ, ಅಂತಹ ಕಠಿಣವಾದ ದಂಡನೆ ವಿಧಿಸುವುದರ ಬದಲಾಗಿ, ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಕಛೇರಿ ಆದೇಶ ಸಂಖ್ಯೆ: ಆಡಳಿತ/ 117/2012–13**

ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದ ನಿರ್ದೇಶಕರು ಹಾಗೂ ಶಿಸ್ತು ಪ್ರಾಧಿಕಾರ ಆಗಿರುವ ನಾನು ವಿಚಾರಣಾಧಿಕಾರಿಗಳು ಸಲ್ಲಿಸಿರುವ ಶ್ರೀ ಶ್ರೀಶೈಲ ಬಿ. ತಳವಾರ, ಹಿಂದಿನ ಸಾಂಖ್ಯಿಕ ನಿರೀಕ್ಷಕರು, ತಾಲ್ಲೂಕು ಕಚೇರಿ, ಜೇವರ್ಗಿ (ಪ್ರಸ್ತುತ ಪ್ರಗತಿ ಸಹಾಯಕರು, ತಾಲ್ಲೂಕು ಪಂಚಾಯತಿ, ಗುಲಬರ್ಗಾ ಜಿಲ್ಲೆ) ಇವರ ವಿರುದ್ಧದ ಇಲಾಖಾ ವಿಚಾರಣೆ ವರದಿಯನ್ನು ಸೂಕ್ಷ್ಮವಾಗಿ ಪರಿಶೀಲಿಸಲಾಗಿ ವಿಚಾರಣಾಧಿಕಾರಿಗಳ, ವಿಚಾರಣಾ ಸಂದರ್ಭದಲ್ಲಿ ತುಲನೆ ಮಾಡಿ ಸರಿಯಾದ ನಿರ್ಧಾರಗಳಿಗೆ ಬಂದಿರುವುದು ಕಂಡು ಬಂದಿರುತ್ತದೆ. ಆದ್ದರಿಂದ, ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ: 8 (iii)ರ ಅನ್ವಯ, ಶ್ರೀ ಶ್ರೀಶೈಲ ಬಿ. ತಳವಾರ, ಸಾಂಖ್ಯಿಕ ನಿರೀಕ್ಷಕರು, ಇವರಿಗೆ ಅವರ ಮುಂದಿನ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ಸಹಿತವಾಗಿ (with cumulative effect) ತಡೆಹಿಡಿಯುವ ದಂಡನೆ ವಿಧಿಸಲಾಗಿದೆ.

**ಹೆಚ್.ಇ. ರಾಜಶೇಖರಪ್ಪ,**
ನಿರ್ದೇಶಕರು.

**ಪಿ.ಆರ್. 757**

## ಸಹಕಾರ ಇಲಾಖೆ

**ಸಹಕಾರ ಸಂಘಗಳ ಉಪನಿಬಂಧಕರು, ಕೇಂದ್ರ ವಲಯ,, ಬೆಂಗಳೂರು ನಗರ ಜಿಲ್ಲೆ ರವರಕಛೇರಿ**

**ನಂ.146, 8ನೇ ಕ್ರಾಸ್, 3ನೇ ಮುಖ್ಯರಸ್ತೆ, ಮಾರ್ಗೋಸಾ ರಸ್ತೆ, ಮಲ್ಲೇಶ್ವರಂ, ಬೆಂಗಳೂರು –560 003**

**ಅಧಿಸೂಚನೆ**

**ಕ್ರ.ಸಂ.ಡಿಆರ್‌ಬಿ–ಸಿ/ಸಿಬ್ಬಂದಿ/ಆರ್‌ಟಿಐ/38/2011–12, ದಿನಾಂಕ: 02–06–2012**

**4(1)(1)ಅ ಸಹಕಾರ ಇಲಾಖೆಯ ಜಿಲ್ಲಾ ಕಛೇರಿಯ ರಚನೆ ಕಾರ್ಯಗಳು, ಕರ್ತವ್ಯಗಳು**

**01**. ಸಹಕಾರ ಇಲಾಖೆಯು ಕರ್ನಾಟಕ ಸರ್ಕಾರದ ಪ್ರಮುಖ ಇಲಾಖೆಗಳಲ್ಲಿ ಒಂದಾಗಿದೆ. ಸಹಕಾರ ಇಲಾಖೆಯು ಸರ್ವವ್ಯಾಪಿಯಾಗಿದ್ದು, ರಾಜ್ಯದ ಆರ್ಥಿಕ ಬೆಳವಣಿಗೆಗೆ ಅದ್ವಿತೀಯ ಕಾಣಿಕೆ ಸಲ್ಲಿಸುತ್ತಿದೆ. ಸಹಕಾರ ಇಲಾಖೆಯು ಬೆಂಗಳೂರು ನಗರ ಜಿಲ್ಲೆ. ಕೇಂದ್ರ ವಲಯದ ವ್ಯಾಪ್ತಿಯಲ್ಲಿ ಸಹಕಾರ ಚಳುವಳಿಯ, ಸಹಕಾರ ಸಂಘಗಳ ಸ್ಥಾಪನೆ, ಅವುಗಳ ಬೆಳವಣಿಗೆ, ಪ್ರಗತಿ, ಅಭಿವೃದ್ಧಿಗೆ ಅಗತ್ಯವಿರುವ ಸಲಹೆ ಸೂಚನೆಗಳನ್ನು ನೀಡುತ್ತದೆ. ಕುಶಲಕರ್ಮಿಗಳು ಕಾರ್ಮಿಕರು, ನೇಕಾರರು , ಮೀನುಗಾರರು , ಪರಿಶಿಷ್ಟ ಜಾತಿ: ಪಂಗಡ ಹಿಂದುಳಿದ ವರ್ಗ, ಮಹಿಳೆಯರು, ಕೂಲಿ ಕಾರ್ಮಿಕರು, ನಾಗರೀಕರು, ಇವರುಗಳ ಸರ್ವತೋಮುಖ ಅಭಿವೃದ್ಧಿಗೆ ಸಹಕಾರ ಸಂಘಗಳ ಮೂಲಕ ಅವಿರತವಾಗಿ ಶ್ರಮಿಸುತ್ತಿದೆ. ಕಛೇರಿಯಿಂದ ಕೇವಲ ನಿಯಂತ್ರಣ ಕಾರ್ಯಗಳನ್ನಷ್ಟೇ ನಿರ್ವಹಿಸದೇ, ಸಲಹೆ ಸೂಚನೆ, ಅಭಿಪ್ರಾಯಗಳನ್ನು ನೀಡಿ, ಜಿಲ್ಲೆಯ ಜನರ ಆರ್ಥಿಕ ಹಾಗೂ ಸಾಮಾಜಿಕ ಅಭಿವೃದ್ಧಿಯನ್ನು ತನ್ನ ಗುರಿಯನ್ನಾಗಿಸಿಕೊಂಡಿದೆ. ಈ ನಿಟ್ಟಿನಲ್ಲಿ ಸರ್ಕಾರದ ವಿವಿಧ ಇಲಾಖೆಗಳೊಂದಿಗೆ ಸಮನ್ವಯತೆಯನ್ನು ಸಾಧಿಸಿದೆ.

ಬೆಂಗಳೂರು ನಗರ ಜಿಲ್ಲೆ ಕೇಂದ್ರ ವಲಯದ ವ್ಯಾಪ್ತಿಯಲ್ಲಿರುವ ವಿವಿಧ ರೀತಿಯ ಸಹಕಾರ ಸಂಘಗಳಿಗೆ ಆರ್ಥಿಕ ಸಹಾಯವನ್ನು ನೀಡುವುದರ ಜೊತೆಗೆ ತಾಂತ್ರಿಕ ಮಾರ್ಗದರ್ಶನವನ್ನು ಸಹ ನೀಡುತ್ತಿದೆ. ಈ ಬೆಂಗಳೂರು ನಗರ ಜಿಲ್ಲೆಯ ಕೇಂದ್ರ ವಲಯದ ವ್ಯಾಪ್ತಿಯಲ್ಲಿರುವ ಸಹಕಾರ ಸಂಘಗಳ ಕಾರ್ಯಚಟುವಟಿಕೆಗಳ ಮೇಲ್ವಿಚಾರಣೆ, ಆಡಳಿತಾತ್ಮಕ ನಿರ್ವಹಣೆ ಕಾರ್ಯಗಳನ್ನು ಕೈಗೊಳ್ಳುತ್ತಿದೆ. ಸಮಷ್ಟಿದೃಷ್ಟಿಯಿಂದ ಈ ಕಛೇರಿಯ ಕೆಲಸ ಕಾರ್ಯಗಳೆಂದರೆ:

1. ಸಹಕಾರ ಸಂಘಗಳ ನೋಂದಣಿ
2. ಸಹಕಾರ ಸಂಘಗಳ ನಿಯಂತ್ರಣ ಮತ್ತು ಮೇಲ್ವಿಚಾರಣೆ
3. ಸಲಹೆ ಮತ್ತು ಮಾರ್ಗದರ್ಶನ
4. ಆಡಳಿತ ಮಂಡಳಿಗಳ ಚುನಾವಣಾ ಕಾರ್ಯಗಳು
5. ವ್ಯಾಜ್ಯ:ದಾವೆಗಳ ಇತ್ಯರ್ಥ ಪಡಿಸುವಿಕೆ
6. ಸಹಕಾರ ಸಂಘಗಳ ಏಳ್ಗೆಗೆ ಸರ್ಕಾರದ ವತಿಯಿಂದ ಕೊಡಮಾಡುವ ಆರ್ಥಿಕ ನೆರವು – ಇತ್ಯಾದಿ

ಜಿಲ್ಲೆಯಲ್ಲಿನ ಸಹಕಾರ ಸಂಘಗಳು ಸಮರ್ಥ ಹಾಗೂ ಪರಿಣಾಮಕಾರಿಯಾಗಿ ಕಾರ್ಯನಿರ್ವಹಿಸಿ ಈ ತನ್ಮೂಲಕ ಸಹಕಾರ ಸದಸ್ಯರುಗಳ ಅಭಿವೃದ್ಧಿಗೆ ಉತ್ತಮ ಪರಿಸರವನ್ನು ನಿರ್ಮಿಸುವ ಆಶಯ ಈ ಕಛೇರಿಯದ್ದಾಗಿರುತ್ತದೆ. ಸಹಕಾರ ತತ್ವಗಳ ಆಧಾರದ ಮೇಲೆ ಸಹಕಾರ ಸಂಘಗಳನ್ನು ಸಂಘಟಿಸಿ ಸಹಕಾರ ಚಳುಚಳಿಗೆ ಭದ್ರಬುನಾದಿಯನ್ನು ನಿರ್ಮಿಸಿ, ಸಾಮಾಜಿಕ ಮತ್ತು ಆರ್ಥಿಕ ಪ್ರಗತಿಗೆ ಶ್ರಮಿಸುತ್ತಿದೆ.

ಸರ್ಕಾರದ ಅಧಿಸೂಚನೆ ಸಂಖ್ಯೆ ಸಇ/302/ಎಸಸೇ/2010 ದಿನಾಂಕ: 30–03–2011 ರನ್ವಯ ದಿನಾಂಕ: 01–04–2011 ರಿಂದ ಸಂಘಗಳ ಜಿಲ್ಲಾ ನೋಂದಣಾಧಿಕಾರಿಯಾಗಿ ಸಂಘಗಳ ನೋಂದಣಿ ಮಾಡುವುದು ಕಾಲಿಕವಾಗಿ ಸಲ್ಲಿಸಲ್ಪಡುವ ಲೆಕ್ಕಪತ್ರಗಳನ್ನು ದಾಖಲು ಮಾಡುವುದು , ದಾಖಲೆಗಳನ್ನು ನಿರ್ವಹಿಸುವುದು ಮತ್ತು ಸಂಸ್ಥೆಗಳ ಸಂಘಗಳಿಗೆ ಸೂಕ್ತ ಮಾರ್ಗದರ್ಶನ ನೀಡುವುದು.

**02. ಸಹಕಾರ ಸಂಘಗಳ ಉಪನಿಬಂಧಕರು, ಕೇಂದ್ರ ವಲಯ, ಬೆಂಗಳೂರು ನಗರ ಜಿಲ್ಲೆ ಕಛೇರಿಯಲ್ಲಿ ಅನುಷ್ಠಾನ:ಜಾರಿಗೊಳಿಸುವ ಶಾಸನಗಳು**

1. ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಹಾಗೂ ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960.
2. ಕರ್ನಾಟಕ ಸೌಹಾರ್ದ ಸಹಕಾರಿ ಕಾಯ್ದೆ 1997, ಹಾಗೂ ಕರ್ನಾಟಕ ಸೌಹಾರ್ದ ನಿಯಮಗಳು
3. ಕರ್ನಾಟಕ ಲೇವಾದೇವಿಗಾರರ ಕಾಯ್ದೆ 1961 ಹಾಗೂ ಕರ್ನಾಟಕ ಲೇವಾದೇವಿಗಾರರ ನಿಯಮಗಳು 1965.
4. ಗಿರವಿದಾರರ ಕಾಯ್ದೆ 1961, ಗಿರವಿದಾರರ ನಿಯಮಗಳು 1966.
5. ಚೀಟಿನಿಧಿ ಕಾಯ್ದೆ 1982 ಹಾಗೂ ಚೀಟಿ ನಿಧಿ ನಿಯಮಾವಳಿಗಳು 1983

6. ಕರ್ನಾಟಕ ದುಬಾರಿ ಬಡ್ಡಿ ನಿಷೇದ ಕಾಯ್ದೆ 2004

7. ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ಮತ್ತು ನಿಯಮಗಳು 1961

**03. ಸಹಕಾರ ಇಲಾಖೆಯು ತನ್ನ ಗುರಿ ಸಾಧನೆಗೆ ನಿರ್ವಹಿಸುತ್ತಿರುವ ಪ್ರಮುಖ ಕರ್ತವ್ಯಗಳು**

1. ಸಹಕಾರ ತತ್ವಗಳ ಪರಿವಿಡಿಯಲ್ಲಿ , ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಮತ್ತು ನಿಯಮಗಳ ರೀತ್ಯಾ ವಿವಿಧ ಸ್ವರೂಪದ ಸಹಕಾರ ಸಂಘಗಳ ಸಂಘಟನೆ ಮತ್ತು ನೋಂದಣಿ ಮಾಡುವುದು

2. ಸಹಕಾರ ಕಾಯ್ದೆ ನಿಯಮಗಳ ರೀತ್ಯಾ ವಿವಿಧ ಆಡಳಿತಾತ್ಮಕ, ಶಾಸನಾತ್ಮಕ ಅರೆ ನ್ಯಾಯಿಕ ಕಾರ್ಯಗಳ ನಿರ್ವಹಣೆ.

3. ವಿವಿಧ ರೀತಿಯ ಸಹಕಾರ ಸಂಘಗಳಿಗೆ ವಾರ್ಷಿಕ ಯೋಜನೆಗಳಡಿಯಲ್ಲಿಪಾಲು ಬಂಡವಾಳ, ಸಾಲ ಸಹಾಯಧನ, ಅನುದಾನ ರೂಪದಲ್ಲಿ , ಸರ್ಕಾರದ ಪರವಾಗಿ ಧನಸಹಾಯ ನೀಡುವಿಕೆಗೆ ಕ್ರಮ

4. ದೀನ, ದಲಿತರು ,ಅಲ್ಪಸಂಖ್ಯಾತರು, ಪರಿಶಿಷ್ಟ ಜಾತಿ:ಪಂಗಡದ ಜನರು ಸಹಕಾರ ಚಳುವಳಿಯ ಮುಖ್ಯವಾಹಿನಿಗೆ ತರಲು ಅವಶ್ಯ ಕ್ರಮ ಕೈಗೊಳ್ಳುವುದು

5. ಸಹಕಾರ ಸಂಘಗಳ ಕಾಯ್ದೆಯಲ್ಲಿರುವ ಅವಕಾಶಗಳ ರೀತ್ಯಾ ಸಹಕಾರ ಸಂಘಗಳ ಪರಿವೀಕ್ಷಣೆ , ಮೇಲ್ವಿಚಾರಣೆ ಹಾಗೂ ಸಹಕಾರ ಸಂಘಗಳ ಕಾಯ್ದೆಯನ್ವಯ ಕಾರ್ಯನಿರ್ವಹಿಸುವುದು

6. ಸಹಕಾರ ಸಂಘಗಳ ಕಾಯ್ದೆಯ ಅವಕಾಶಗಳ ರೀತ್ಯಾ ವಿನಿಮಯದ (ರೆಗ್ಯುಲೇಷನ್) ಕಾರ್ಯಗಳ ನಿರ್ವಹಣೆ

7. ಸಹಕಾರ ಸಂಘಗಳ ಸಿಬ್ಬಂದಿ, ಸದಸ್ಯರ ನಡುವಿನ ವ್ಯಾಜ್ಯ,ಆಡಳಿತ ಮಂಡಳಿಯ ವಿರುದ್ಧ ದಾವೆಗಳನ್ನು ಅರೆನ್ಯಾಯಿಕ ಕಲಾಪಗಳ ಮೂಲಕ ಇತ್ಯರ್ಥಪಡಿಸುವುದು.

8 ಸಹಕಾರ ಕಾಯ್ದೆಯಡಿ ನೀಡಲ್ಪಟ್ಟ ತೀರ್ಪು, ಐತೀರ್ಪು, ಆದೇಶ, ನಿರ್ದೇಶನಗಳನ್ನು ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ಅಧಿಕಾರ ಪ್ರತ್ಯಾಯೋಜನೆಯನ್ವಯ ಕ್ರಮವಿಡುವುದು

9 ತೃಪ್ತಿಕರವಾಗಿ ಕಾರ್ಯನಿರ್ವಹಣೆ,ಸಹಕಾರಿ ಧ್ಯೇಯೋದ್ದೇಶಗಳನ್ನು ಜಾರಿಗೊಳಿಸುವಲ್ಲಿ ವಿಫಲವಾದ ಹಾಗೂ ಸಹಕಾರ ಕಾಯ್ದೆಗೆ ವಿರುದ್ಧವಾಗಿರುವ ಸಹಕಾರ ಸಂಘಗಳನ್ನು ಸಮಾಪನೆಗೊಳಿಸುವುದು.

10. ಸಹಕಾರ ಕಾಯ್ದೆ, ನಿಯಮಗಳ ಉಲ್ಲಂಘನೆಯಾದ ಸಂದರ್ಭದಲ್ಲಿ ಇಲಾಖಾಧಿಕಾರಿಗಳನ್ನು ಆಡಳಿತಾಧಿಕಾರಿಯನ್ನಾಗಿ ನೇಮಿಸುವುದು ಹಾಗೂ ಆಡಳಿತ ಮಂಡಳಿಯ ಸ್ಥಾನದಲ್ಲಿ ಉನ್ನತಾಧಿಕಾರಿಗಳ ಆದೇಶದ ರೀತ್ಯಾ ಆಡಳಿತಾಧಿಕಾರಿಯಾಗಿ ಕಾರ್ಯನಿರ್ವಹಿಸುವುದು.

11 ಸಹಕಾರ ಸಂಘಗಳಿಗೆ ಹಾಗೂ ಸಹಕಾರಿ ಸದಸ್ಯರುಗಳಿಗೆ ಇಲಾಖಾಧಿಕಾರಿಗಳು ಸ್ನೇಹಿತ, ತತ್ವಜ್ಞಾನಿ ಮತ್ತು ಮಾರ್ಗದರ್ಶಿಯಂತೆ, ಸಲಹೆ, ಸೂಚನೆಗಳನ್ನು ನೀಡುವುದು.

12 ಸಹಕಾರ ರಂಗದ ಅಭಿವೃದ್ಧಿಗೆ ಸರ್ಕಾರದವರು ಮಾಡಿರುವ ನೀತಿ, ಯೋಜನೆ ಇತ್ಯಾದಿಗಳಿಗೆ ಸಹಾಯ ಸಹಕಾರ ನೀಡಿ, ಕಾರ್ಯಗತಗೊಳಿಸುವಲ್ಲಿ ಕ್ರಮ.

13 ಬೆಂಗಳೂರು ನಗರ ಜಿಲ್ಲೆಯ ಕೇಂದ್ರ ವಲಯದ ಸಹಕಾರ ಕ್ಷೇತ್ರದ ಅಭಿವೃದ್ಧಿಗೆ ಪ್ರಾಸಂಗಿಕವಾಗಿ ಅಗತ್ಯವಿರುವ , ಅವಶ್ಯವಿರುವ ಇತರೆ ಎಲ್ಲಾ ಕಾರ್ಯಗಳನ್ನು ಕರ್ತವ್ಯಗಳ ನಿರ್ವಹಿಸುವುದು

14 ಸರ್ಕಾರದ ಅತ್ಯಂತ ಮುಖ್ಯ ಯೋಜನೆಯಾದ ಯಶಸ್ವಿನಿ ರೈತರ ಆರೋಗ್ಯ ರಕ್ಷಣಾ ಯೋಜನೆಯನ್ನು ಅನುಷ್ಠಾನಗೊಳಿಸಿ ರೈತ ಹಿತ ಕಾಯಲು ಕ್ರಮವಿಡುವುದು

15 ಕೇಂದ್ರ ವಲಯ ವ್ಯಾಪ್ತಿಯಲ್ಲಿ ಸಂಘಗಳ ನೋಂದಣಿ, ಸಲ್ಲಿಸಲ್ಪಟ್ಟ ಲೆಕ್ಕಪತ್ರಗಳನ್ನು ದಾಖಲುಮಾಡುವುದು, ಉಪನಿಯಮಗಳ ತಿದ್ದುಪಡಿ ಅನುಮೋದನೆ ಇತ್ಯಾದಿ ಕಾರ್ಯಗಳನ್ನು ನಿರ್ವಹಿಸುವುದು.

**04. ಬೆಂಗಳೂರು ನಗರ ಜಿಲ್ಲೆ ಕೇಂದ್ರ ವಲಯದ ವ್ಯಾಪ್ತಿಯಲ್ಲಿ ಪ್ರಸಕ್ತ ಅವಧಿಯವರೆಗೆ ಒಟ್ಟು 769 ಸಹಕಾರ ಸಂಘಗಳಿವೆ ವಿವರ ಈ ಕೆಳಕಂಡಂತಿವೆ.**

"ಎಲ್ಲರಿಗಾಗಿ ಒಬ್ಬರು ಒಬ್ಬರಿಗಾಗಿ ಎಲ್ಲರೂ" ಎಂಬ ಮಹತ್ವಾಕಾಂಕ್ಷೆಯ ಧ್ಯೇಯೋದ್ದೇಶಗಳೊಂದಿಗೆ ಸಹಕಾರ ಚಳುವಳಿಯನ್ನು ಜಿಲ್ಲೆಯ ಜನತೆಯಲ್ಲಿ ಹಾಸು ಹೊಕ್ಕಾಗಿಸಲು ಕಛೇರಿಯು ಅವಿರತವಾಗಿ ಶ್ರಮಿಸುತ್ತಿದೆ.

| ಕ್ರ.ಸಂ | ವಿವಿಧ ಸಹಕಾರ ಸಂಘಗಳು | ದಿ:31–3–2011ಕ್ಕೆ ಇದ್ದಂತೆ ಸಹಕಾರ ಸಂಘಗಳ ಸಂಖ್ಯೆ |
|---|---|---|
| 01 | ರಾಜ್ಯಮಟ್ಟದ ಸಹಕಾರ ಸಂಘಗಳು | 40 |
| 02 | ಪ್ರಾಥಮಿಕ ಕೃಷಿ ಗ್ರಾಮೀಣಾಭಿವೃದ್ಧಿ ಬ್ಯಾಂಕ್ | – |
| 03 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು | – |
| 04 | ಹಾಲು ಉತ್ಪಾದಕರ ಸಹಕಾರ ಸಂಘಗಳು | – |
| 05 | ಕೃಷಿಯೇತರ ಪತ್ತಿನ ಸಹಕಾರ ಸಂಘಗಳು | 137 |
| 06 | ಗೃಹ ನಿರ್ಮಾಣ ಸಹಕಾರ ಸಂಘಗಳು | 189 |
| 07 | ಲೈವ್ ಸ್ಟಾಕ್ ಸಹಕಾರ ಸಂಘಗಳು | – |
| 08 | ಪಟ್ಟಣ ಸಹಕಾರ ಬ್ಯಾಂಕುಗಳು | 30 |
| 09 | ನೌಕರರ ಪತ್ತಿನ ಸಹಕಾರ ಸಂಘಗಳು | 97 |
| 10 | ಕೂಲಿಕಾರರ ಸಹಕಾರ ಸಂಘಗಳು | 1 |
| 11 | ಮಹಿಳೆಯರ ವಿವಿದೋದ್ದೇಶ ಸಹಕಾರ ಸಂಘಗಳು | 18 |
| 12 | ವಿವಿದೊದ್ಧೇಶ ಸಹಕಾರ ಸಂಘಗಳು | 12 |
| 13 | ಬಳಕೆದಾರರ ಸಹಕಾರ ಸಂಘಗಳು | 169 |
| 14 | ದರ್ಜಿಗಳ ಸಹಕಾರ ಸಂಘಗಳು | – |
| 15 | ಮಡಿವಾಳಗಾರರ ಸಹಕಾರ ಸಂಘಗಳು | – |
| 16 | ಮುದ್ರಣಾಲಯದ ಸಹಕಾರ ಸಂಘಗಳು | 3 |
| 17 | ನೀರು ಬಳಕೆದಾರರ ಸಹಕಾರ ಸಂಘಗಳು | – |
| 18 | ಮೀನುಗಾರರ ಸಹಕಾರ ಸಂಘಗಳು | 2 |
| 19 | ನೇಕಾರರ ಸಹಕಾರ ಸಂಘಗಳು | 23 |
| 20 | ಸಗಟು ಮಾರಾಟ ಸಹಕಾರ ಸಂಘಗಳು | 2 |
| 21 | ಕೈಗಾರಿಕಾ ಸಹಕಾರ ಸಂಘಗಳು | 15 |
| 22 | ಇತರೆ ಸಹಕಾರ ಸಂಘಗಳು | 23 |
| | **ಒಟ್ಟು** | **769** |

ಒಟ್ಟು 769 ಸಹಕಾರ ಸಂಘಗಳು ಇದ್ದು ,ಬೆಂಗಳೂರು ನಗರದ ಜನಜೀವನದಲ್ಲಿ ಸಹಕಾರ ಚಳವಳಿಯು ಹಾಸುಹೊಕ್ಕಾಗಿರುತ್ತದೆ.

**05. ಜಿಲ್ಲೆಯಲ್ಲಿ ಸಹಕಾರ ಇಲಾಖಾ ಕಚೇರಿಗಳ ಸಂರಚನೆ, ಆಡಳಿತದ ವಿವಿಧ ಹಂತಗಳು**

01. ಸಹಕಾರ ಸಂಘಗಳ ಉಪನಿಬಂಧಕರು ಕೇಂದ್ರ ವಲಯಬೆಂಗಳೂರು ನಗರಜಿಲ್ಲೆ, ಬೆಂಗಳೂರು

02. ಸಹಕಾರ ಸಂಘಗಳ ಸಹಾಯಕ ನಿಬಂಧಕರು ಕೇಂದ್ರ ವಲಯ ವೃತ್ತ, ಬೆಂಗಳೂರು

**05.01.ಈ ಮೇಲ್ಕಂಡ ಅಧಿಕಾರಿಗಳಲ್ಲದೇ ಈ ಕೆಳಕಂಡ ವೃಂದದ ಸಿಬ್ಬಂದಿ ವರ್ಗವು ಸಹ ಕಾರ್ಯನಿರ್ವಹಿಸುತ್ತಿರುತ್ತಾರೆ.**

1. ಸಹಕಾರ ಅಭಿವೃದ್ಧಿ ಅಧಿಕಾರಿಗಳು
2. ಅಧೀಕ್ಷಕರು
3. ಮಾರಾಟಾಧಿಕಾರಿ
4. ಸಹಕಾರ ಸಂಘಗಳ ಹಿರಿಯ ನಿರೀಕ್ಷಕರು
5. ಸಹಕಾರ ಸಂಘಗಳ ನಿರೀಕ್ಷಕರು
6. ಪ್ರಥಮ ದರ್ಜೆ ಸಹಾಯಕರು
7. ಶೀಘ್ರಲಿಪಿಗಾರರು,
8. ಹಿರಿಯ ಬೆರಳಚ್ಚುಗಾರರು
9. ದ್ವಿತೀಯ ದರ್ಜೆ ಸಹಾಯಕರು
10. ಬೆರಳಚ್ಚುಗಾರರು
11. ವಾಹನ ಚಾಲಕರು
12. ಡಿ ದರ್ಜೆ ನೌಕರರು: ಜಾರಿಗಾರರು

ಒಟ್ಟಾರೆ ಬೆಂಗಳೂರು ನಗರ ಜಿಲ್ಲೆ ಕೇಂದ್ರ ವಲಯದ ವ್ಯಾಪ್ತಿಯ ಇಲಾಖಾ ಕಛೇರಿಗಳಲ್ಲಿ ತಹಲ್‌ವರೆವಿಗೂ ಮಂಜೂರಾಗಿರುವ ಹುದ್ದೆಗಳು ಹಾಗೂ ಕಾರ್ಯನಿರತ ಸಿಬ್ಬಂದಿ ಸಂಖ್ಯೆ , ಖಾಲಿ ಇರುವ ಹುದ್ದೆಗಳ ವಿವರಗಳು ಕೆಳಕಂಡಂತಿರುತ್ತವೆ.

| ಕ್ರಮ ಸಂ. | ಹುದ್ದೆಯ ಹೆಸರು | ಮಂಜೂರಾದ ಹುದ್ದೆ | ಕಾರ್ಯ ನಿರತ ಹುದ್ದೆ | ಖಾಲಿಹುದ್ದೆ |
|---|---|---|---|---|
| **ಸಹಕಾರ ಸಂಘಗಳ ಉಪನಿಬಂಧಕರು, ಕೇಂದ್ರ ವಲಯ, ಬೆಂಗಳೂರು ನಗರ ಜಿಲ್ಲೆ ಬೆಂಗಳೂರು ಇವರ ಕಛೇರಿ** | | | | |
| 01 | ಸಹಕಾರಸಂಘಗಳ ಉಪನಿಬಂಧಕರು | 01 | 01 | – |
| 02 | ಸಹಕಾರ ಅಭಿವೃದ್ಧಿ ಅಧಿಕಾರಿ | 02 | 02 | – |
| 03 | ಅಧೀಕ್ಷಕರು | 01 | 01 | – |
| 04 | ಸಹಕಾರ ಸಂಘಗಳ ಹಿರಿಯ ನಿರೀಕ್ಷಕರು | 02 | 02 | – |
| 05 | ಸಹಕಾರ ಸಂಘಗಳ ನಿರೀಕ್ಷಕರು | 02 | 01 | 01 |
| 06 | ಪ್ರಥಮ ದರ್ಜೆ ಸಹಾಯಕರು | 02 | 02 | – |
| 07 | ಶೀಘ್ರಲಿಪಿಗಾರರು | 01 | 01 | |
| 08 | ಬೆರಳಚ್ಚುಗಾರರು | 01 | – | 01 |
| 09 | ದ್ವಿತಿಯ ದರ್ಜೆ ಸಹಾಯಕರು | 02 | 02 | – |
| 10 | ವಾಹನ ಚಾಲಕರು | 01 | 01 | – |
| 11 | ಡಿ. ದರ್ಜೆ ನೌಕರರು | 02 | 01 | 01 |
| | **ಒಟ್ಟು** | **17** | **14** | **03** |
| **2. ಸಹಕಾರ ಸಂಘಗಳ ಸಹಾಯಕ ನಿಬಂಧಕರು,ಕೇಂದ್ರ ವಲಯ ವೃತ್ತ ರವರ ಕಛೇರಿ, ಬೆಂಗಳೂರು** | | | | |
| 01 | ಸಹಕಾರ ಸಂಘಗಳ ಸಹಾಯಕ ನಿಬಂಧಕರು | 01 | 01 | – |
| 02 | ಮಾರಾಟಾಧಿಕಾರಿ(ಸಹಕಾರ ಅಭಿವೃದ್ದಿ ಅಧಿಕಾರಿ) | 01 | 01 | – |

| | | | | |
|---|---|---|---|---|
| 03 | ಅಧೀಕ್ಷಕರು | 01 | 01 | – |
| 04 | ಸಹಕಾರ ಸಂಘಗಳ ನಿರೀಕ್ಷಕರು | 03 | 03 | – |
| 05 | ಪ್ರಥಮ ದರ್ಜೆ ಸಹಾಯಕರು | 1 | 1 | – |
| 06 | ದ್ವಿತಿಯ ದರ್ಜೆ ಸಹಾಯಕರು | 04 | 02 | 02 |
| 07 | ಬೆರಳಚ್ಚುಗಾರರು | 01 | 01 | – |
| 08 | ವಾಹನಚಾಲಕರು | 01 | – | 01 |
| 09 | ಜಾರಿಗಾರರು | – | – | – |
| 10 | ಡಿ ದರ್ಜೆ ನೌಕರರು | 04 | 02 | 02 |
| | **ಒಟ್ಟು** | **17** | **12** | **05** |

ಈ ಮೇಲಿನಂತೆ ಸಹಕಾರ ಇಲಾಖೆಯ ಬೆಂಗಳೂರು ನಗರಜಿಲ್ಲೆ ಕೇಂದ್ರ ವಲಯದ ವ್ಯಾಪ್ತಿಯಲ್ಲಿ ಇಲಾಖಾ ಕಛೇರಿಗಳ ಸಂರಚನೆಯ ನಕ್ಷೆಯು ಸಮಷ್ಠಿಯಾಗಿ ಆಡಳಿತಾತ್ಮಕ ರಚನೆಯನ್ನು ಸ್ಪಷ್ಟಪಡಿಸುತ್ತದೆ.

6. ಜಿಲ್ಲೆಯಲ್ಲಿ ಒಟ್ಟು 2 ಹಂತಗಳಲ್ಲಿ ಸಂಘಟಿತವಾಗಿದೆ. ಈ ಹಂತಗಳು ಯಾವುವೆಂದರೆ ಜಿಲ್ಲಾ ಮಟ್ಟ, ಉಪವಿಭಾಗೀಯ ಮಟ್ಟ, ಇಲಾಖೆಯ ಆಡಳಿತಾತ್ಮಕ ಕಾರ್ಯಗಳನ್ನು ಜಾರಿಗೆ ತರುವ ಮೂಲಕ ಆಡಳಿತಾತ್ಮಕ ಮೇಲ್ವಿಚಾರಣೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ.

6.01 ಸಹಕಾರ ಸಂಘಗಳ ಉಪನಿಬಂದಕರು ಕೇಂದ್ರ ವಲಯ ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಇವರು ಜಿಲ್ಲಾ ಮಟ್ಟದ ಅಧಿಕಾರಿಯಾಗಿದ್ದು, ಇವರು ಲೇವಾದೇವಿ, ಗಿರವಿ ಹಾಗೂ ಚೀಟನಿಧಿಗಳ ನಿಬಂಧಕರು, ಹಾಗೂ ಸಂಘಗಳ ಜಿಲ್ಲಾ ನೋಂದಣಾಧಿಕಾರಿಗಳೂ ಸಹ ಆಗಿರುತ್ತಾರೆ. ಇವರು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959, ಕರ್ನಾಟಕ ಲೇವಾದೇವಿಗಾರರ ಕಾಯ್ದೆ, ಗಿರವಿದಾರರ ಕಾಯ್ದೆ, ಚೀಟನಿಧಿಗಳ ಕಾಯ್ದೆ ಮತ್ತು ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆಗಳ ಶಾಸನಾತ್ಮಕ ಅಧಿಕಾರಗಳನ್ನು ಚಲಾಯಿಸುವ ಅಧಿಕಾರ ಹೊಂದಿರುತ್ತಾರೆ. ಸಹಕಾರ ಸಂಘಗಳಲ್ಲಿನ ಆಡಳಿತ ಮಂಡಳಿಗಳಲ್ಲಿ ಸರ್ಕಾರದ ಪ್ರತಿನಿಧಿಯಾಗಿ ಕಾರ್ಯನಿರ್ವಹಿಸುತ್ತಿದ್ದಾರೆ.

6.02. ಸಹಕಾರ ಸಂಘಗಳ ಉಪನಿಬಂಧಕರು ಕೇಂದ್ರ ವಲಯ ಬೆಂಗಳೂರು ನಗರ ಜಿಲ್ಲೆ ಇವರ ಅಧೀನದಲ್ಲಿ ಬೆಂಗಳೂರು ಕೇಂದ್ರ ವಲಯ ವೃತ್ತಕ್ಕೆ ಉಪವಿಭಾಗಿಯ ಮಟ್ಟದ ಅಧಿಕಾರಿಗಳಾಗಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಇದ್ದು, ಇವರಿಗೆ ಸರ್ಕಾರದ ಆದೇಶದನ್ವಯ ಅಧಿಕಾರ ಪ್ರತ್ಯಾಯೋಜನೆಯಾಗಿರುತ್ತದೆ. ಇವರ ಅಧಿಕಾರ ವ್ಯಾಪ್ತಿಗೆ ಬರುವ ಸಹಕಾರ ಸಂಘಗಳ ಮೇಲೆ ಹಾಗೂ ಗಿರವಿ ,ಹಣಕಾಸು ಚೀಟಿ ಸಂಸ್ಥೆಗಳ ಶಾಸನಾತ್ಮಕ ಹಾಗೂ ಆಡಳಿತಾತ್ಮಕ ನಿಯಂತ್ರಣ ಹೊಂದಿರುತ್ತಾರೆ. ಅದೇ ರೀತಿ ಸಹಕಾರ ಸಂಘಗಳ ಸಂಯೋಜನೆ, ಸಮಾಪನೆ, ಉಪನಿಯಮಗಳ ತಿದ್ದುಪಡಿ, ಪರಿವೀಕ್ಷಣೆ, ನಿರೀಕ್ಷಣೆಗಳ ಜೊತೆಗೆ ಅರೆ ನ್ಯಾಯಿಕ ಕಲಾಪ ಹಾಗೂ ಶಾಸನಗಳು ನೀಡಿರುವ ಆದೇಶದ ಕರ್ತವ್ಯಗಳನ್ನು ನಿರ್ವಹಿಸುತ್ತಾರೆ.

6.03 ರಾಜ್ಯ ಯೋಜನೆಗಳು, ಕೇಂದ್ರ ಪುರಸ್ಕೃತ ಯೋಜನೆಗಳನ್ನು ಅನುಷ್ಠಾನಗೊಳಿಸುವ ಜೊತೆಗೆ ,ರಾಜ್ಯ ಯೋಜನೆಗಳನ್ನು ಜಾರಿಗೊಳಿಸಲಾಗಿರುತ್ತದೆ ಉಪವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೇಂದ್ರ ವಲಯ ವೃತ್ತ ರವರು ರಾಜ್ಯ ಸರ್ಕಾರದ ಯೋಜನೆಗಳ ಅನುಷ್ಟಾನದ ಹೊಣೆಯನ್ನು ಹೊಂದಿರುತ್ತಾರೆ. ಅಲ್ಲದೇ ಇಲಾಖಾ ಮುಖ್ಯಸ್ಥರು ಹಾಗೂ ಪ್ರಾಂತೀಯ ಅಧಿಕಾರಿಗಳ ಅಧೀನದಲ್ಲಿ ಜಿಲ್ಲಾ, ಉಪವಿಭಾಗದ ಹಂತದಲ್ಲಿ ಕ್ಷೇತ್ರೀಯ ಸಿಬ್ಬಂದಿ ಸಹಾಯಕರಾಗಿ ಕಾರ್ಯನಿರ್ವಹಿಸುತ್ತಾರೆ.

6.04 ಈ ಸಂರಚನೆಯು ಇಲಾಖೆಯ ಧ್ಯೇಯೋದ್ದೇಶಗಳನ್ನು ಗುರಿಸಾಧಿಸಲು ಮಾರ್ಗೋಪಾಯವಾಗಿದೆ. ಇಲಾಖೆಯ ಜಿಲ್ಲಾಡಳಿತ ಯಂತ್ರವು ತಂಡದ ಸ್ವರೂಪದಲ್ಲಿ ಕಾರ್ಯನಿರ್ವಹಿಸುತ್ತದೆ. ಸಮರ್ಪಕವಾಗಿ ಹಾಗೂ ಪರಿಣಾಮಕಾರಿಯಾಗಿ ಕಾರ್ಯನಿರ್ವಹಿಸಿ, ಇಲಾಖೆಯ ಧ್ಯೇಯ–ಉದ್ದೇಶಗಳನ್ನು ಜಾರಿಗೊಳಿಸಲು ಕೆಲಸಗಳನ್ನು ವಿಂಗಡಣೆ ಮಾಡಿಕೊಂಡು ತಂಡದೋಪಾದಿಯಲ್ಲಿ ನಿರ್ವಹಿಸುತ್ತಿದೆ.

ಕಛೇರಿಯ ಪ್ರತಿಯೊಬ್ಬ ಸದಸ್ಯರು(ನೌಕರರು–ಅಧಿಕಾರಿಗಳು) ತನ್ನ ನಿರ್ಧಿಷ್ಟ ಪಾತ್ರವನ್ನು ಅರಿತು ತಮ್ಮ ತಮ್ಮ ಕರ್ತವ್ಯಗಳು, ವಹಿಸಿರುವ ಜವಾಬ್ದಾರಿಗಳು, ಅಧಿಕಾರ ಪ್ರತ್ಯಾಯೋಜನೆಯ ರೀತ್ಯಾ ಪರಸ್ಪರ ಪೂರಕವಾಗಿ ನಿರ್ವಹಿಸುವ ಮೂಲಕ ಕರ್ತವ್ಯ ನಿರ್ವಹಿಸುತ್ತಿದ್ದಾರೆ.

6.05. ಜಿಲ್ಲಾ ಮುಖ್ಯಸ್ಥರಾದ ಸಹಕಾರ ಸಂಘಗಳ ಉಪನಿಬಂಧಕರು ಇಲಾಖಾ ಮುಖ್ಯಸ್ಥರು ಹಾಗೂ ಮೇಲಧಿಕಾರಿಗಳ ಮಾರ್ಗದರ್ಶನ ಹಾಗೂ ನಿರ್ದೇಶನಗಳಿಗನುಗುಣವಾಗಿ ಇಲಾಖೆಯ ಸಿಬ್ಬಂದಿಯೊಂದಿಗೆ ಸಮನ್ವಯತೆಯನ್ನು ಸಾಧಿಸಿ ಸುಲಲಿತ ಆಡಳಿತ ವ್ಯವಸ್ಥೆಯನ್ನು ಜಾರಿಗೊಳಿಸಲಾಗುತ್ತದೆ.

7. **ಸಹಕಾರ ಸಂಘಗಳ ಉಪನಿಬಂಧಕರು ಹಾಗೂ ಅವರ ಕಛೇರಿಯ ಅಧಿಕಾರಿ, ನೌಕರರ ಅಧಿಕಾರಿ ಮತ್ತು ಕರ್ತವ್ಯಗಳು :**

ಇಲಾಖೆಯ ಸಂರಚನೆಯ ನಕ್ಷೆಯಲ್ಲಿ ಅಧಿಕಾರದ ಶ್ರೇಣಿಕೃತ ವ್ಯವಸ್ಥೆಯನ್ನು ವೀಕ್ಷಿಸಬಹುದು. ಆ ಪ್ರಕಾರ ಸಹಕಾರ ಸಂಘಗಳ ಉಪನಿಬಂಧಕರ ಕಛೇರಿಯಲ್ಲಿ ಅಧಿಕಾರಿಗಳು ನೌಕರರ ಆಡಳಿತಾತ್ಮಕ ಸ್ಥಾನ ಮತ್ತು ಅಧಿಕಾರ ಮತ್ತು ಕರ್ತವ್ಯಗಳನ್ನು ಈ ಕೆಳಕಂಡಂತೆ ಇರುತ್ತದೆ.

**7.01 ಸಹಕಾರ ಸಂಘಗಳ ಉಪನಿಬಂಧಕರು, ಕೇಂದ್ರ ವಲಯ,ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು**

ಸಹಕಾರ ಸಂಘಗಳ ಉಪನಿಬಂಧಕರು ಕೇಂದ್ರ ವಲಯ, ಬೆಂಗಳೂರು ನಗರ ಜಿಲ್ಲೆಯ ವ್ಯಾಪ್ತಿಯಲ್ಲಿ ಜಿಲ್ಲಾ ಮಟ್ಟದ **"ಎ"** ವರ್ಗದ ಅಧಿಕಾರಿಗಳಾಗಿದ್ದು, ಇವರು ಇಲಾಖಾ ಮುಖ್ಯಸ್ಥರಾದ ಸಹಕಾರ ಸಂಘಗಳ ನಿಬಂಧಕರು, ಹಾಗೂ ಕೇಂದ್ರ ಕಛೇರಿಯ ಉನ್ನತ ಅಧಿಕಾರಿಗಳು ಮತ್ತು ಪ್ರಾಂತ ಮಟ್ಟದ ಅಧಿಕಾರಿಗಳಾದ ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಇವರ ಮಾರ್ಗದರ್ಶನ ಹಾಗೂ ನಿರ್ದೇಶನಗಳಿಗನುಗುಣವಾಗಿ, ಸರ್ಕಾರದ ಸಹಕಾರ ಇಲಾಖೆಯ ಅಧೀನದಲ್ಲಿ ಕಾರ್ಯನಿರ್ವಹಿಸುವುದು, ಈ ಮೇಲಿನ ಕಾಯ್ದೆಗಳಲ್ಲಿ ನಿರ್ಧಿಷ್ಟಪಡಿಸಿರುವ ಅಧಿಕಾರ ಮತ್ತು ಕರ್ತವ್ಯಗಳನ್ನು ನಿರ್ವಹಣೆ ಮಾಡುತ್ತಾರೆ.

7.02 ಸಹಕಾರ ಇಲಾಖೆಯಲ್ಲಿ ಜಿಲ್ಲಾ ಮಟ್ಟದ ಅಧಿಕಾರಿಗಳಾಗಿದ್ದು, ಜಿಲ್ಲಾ ಮಟ್ಟದ ಅಧಿಕಾರವನ್ನು ಹೊಂದಿರುತ್ತಾರೆ. ಇವರು ಆಡಳಿತಾತ್ಮಕ,ಶಾಸನಾತ್ಮಕ ಕಾರ್ಯಗಳನ್ನು ನಿರ್ವಹಿಸುವುದರ ಜೊತೆಗೆ ಅಭಿವೃದ್ಧಿಗೆ ಅಗತ್ಯವಿರುವ ಪೂರಕ ಕ್ರಮಗಳನ್ನು ತೆಗೆದುಕೊಳ್ಳುತ್ತಾರೆ.

ಇವರು ಈ ಕೆಳಕಂಡ ಕಾಯ್ದೆಗಳಲ್ಲಿ ಹಂಚಿಕೆ ಮಾಡಿರುವ ಕರ್ತವ್ಯಗಳನ್ನು ನಿರ್ವಹಿಸುತ್ತಾರೆ.

1. ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959, ಮತ್ತು ಸಹಕಾರ ಸಂಘಗಳ ನಿಯಮಗಳು 1960.
2. ಕರ್ನಾಟಕ ಸೌಹಾರ್ದ ಸಹಕಾರಿ ಕಾಯ್ದೆ 1997, ಹಾಗೂ ಕರ್ನಾಟಕ ಸೌಹಾರ್ದ ಸಹಕಾರ ನಿಯಮಾವಳಿಗಳು
3 ಕರ್ನಾಟಕ ಲೇವಾದೇವಿ ಕಾಯ್ದೆ 1961 ಮತ್ತು ಕರ್ನಾಟಕ ಲೇವಾದೇವಿ ನಿಯಮಾವಳಿಗಳು 1965.
4. ಕರ್ನಾಟಕ ಗಿರವಿದಾರರ ಕಾಯ್ದೆ 1961 ಮತ್ತು ಕರ್ನಾಟಕ ಗಿರವಿ ನಿಯಮಗಳು 1966
5. ಚೀಟಿ ನಿಧಿ ಕಾಯ್ದೆ 1982 ಮತ್ತು ಚೀಟಿ ನಿಧಿ ನಿಯಮಗಳು 1983
6. ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ಹಾಗೂ ನಿಯಮಗಳು 1961.
7. ಜಿಲ್ಲೆಯ ಎಲ್ಲಾ ನೌಕರರ ಸೇವಾ ವಿಷಯಗಳಾದ, ಬಡ್ತಿ, ರಜೆ, ನಿವೃತ್ತಿ, ನಿಯಂತ್ರಣ, ನಿರ್ದೇಶನ ಹಾಗೂ ಶಿಸ್ತು ಕ್ರಮದ ಬಗ್ಗೆ ಪ್ರತ್ಯಾಯೋಜಿತವಾದ ಅಧಿಕಾರದಂತೆ ಕ್ರಮ.
8. ಜಿಲ್ಲೆಯ ಸಹಕಾರ ಇಲಾಖೆಯ ಸಾಮಾನ್ಯ ಆಡಳಿತದ ಮೇಲ್ವಿಚಾರಣೆ
9 ವಿವಿಧ ಯೋಜನೆಗಳ ಅನುಷ್ಠಾನ, ಇಲಾಖಾ ಮುಖ್ಯಸ್ಥರು ನೀಡುವ ಅನುಧಾನಗಳನ್ನು ಸಮರ್ಪಕವಾಗಿ ಸದ್ಬಳಕೆ ಬಗ್ಗೆ, ನೀಡಿದ ಭೌತಿಕ ಗುರಿಗೆ ಅನುಗುಣವಾಗಿ ಸಾಧನೆಗೆ ಕ್ರಮ .
10. ಜಿಲ್ಲೆಯ ಅಂಕಿ ಅಂಶಗಳ ನಿರ್ವಹಣೆ, ಸರ್ಕಾರವು ಸಹಕಾರ ಸಂಘಗಳಿಗೆ ನೀಡುವ ಷೇರು, ಸಾಲ, ಸಹಾಯದನದ ಸದ್ಬಳಕೆ ಬಗ್ಗೆ ಮೇಲ್ವಿಚಾರಣೆ ಹಾಗೂ ರೀಡಿಮೆಬಲ್ ಷೇರು ಮತ್ತು ಸರ್ಕಾರಿ ಸಾಲದ ವಸೂಲಾತಿಯ ಮೇಲ್ವಿಚಾರಣೆ.
11. ತಾಲ್ಲೂಕು ಮಟ್ಟದ ಎಲ್ಲಾ ವಿಧದ ಸಹಕಾರ ಸಂಘಗಳ ಮೇಲ್ವಿಚಾರಣೆ, ವ್ಯಾಜ್ಯಗಳ ವಿಚಾರಣೆ ಹಾಗೂ ಇತ್ಯರ್ಥ.
12. ತಾಲ್ಲೂಕು ಮಟ್ಟ ಹಾಗೂ ಬೆಂಗಳೂರು ಕೇಂದ್ರ ವಲಯ ವ್ಯಾಪ್ತಿಗೆ ಒಳಪಟ್ಟಿರುವ ಅಧಿಕಾರ ಪ್ರತ್ಯಾಯೋಜಿತ ವಿವಿಧ ಸಹಕಾರ ಸಂಘಗಳಿಗೆ ಸಂಬಂಧಪಟ್ಟಂತೆ ಸಹಕಾರ ಸಂಘಗಳ ಕಾಯ್ದೆ ಹಾಗೂ ಸೌಹಾರ್ದ ಕಾಯ್ದೆಯಡಿ ಸಹಕಾರ ಸಂಘಗಳು ಹಾಗೂ ಸೌಹಾರ್ದ ಸಹಕಾರಿಗಳ ನೋಂದಣಿ ಕಾರ್ಯಗಳು, ಮತ್ತು ಸಂಬಂಧಪಟ್ಟ ಸಂಘಗಳ ಉಪನಿಯಮಗಳ ತಿದ್ದುಪಡಿ ನೋಂದಣಿ ಕಾರ್ಯ.
13. ಯಶಸ್ವಿನಿ ರೈತರ ಆರೋಗ್ಯ ರಕ್ಷಣಾ ಯೋಜನೆಯ ಅನುಷ್ಠಾನ ಹಾಗೂ ಆ ಮೂಲಕ ರೈತ ಫಲಾನುಭವಿ ಸದಸ್ಯರುಗಳಿಗೆ ಪ್ರಾಯೋಜಕತ್ವದ ಬಗ್ಗೆ ಮೇಲ್ವಿಚಾರಣೆ .

**7.03 ಕಛೇರಿಯ ಕಾರ್ಯವ್ಯಾಪ್ತಿಯಲ್ಲಿ ಆಡಳಿತಾತ್ಮಕ ಕಾರ್ಯನಿರ್ವಹಿಸುವ ಕಾರ್ಯರಚನೆಯ ವಿವರಗಳು**

ಸಹಕಾರ ಸಂಘಗಳ ಉಪನಿಬಂಧಕರು, ಕೇಂದ್ರ ವಲಯ,ಬೆಂಗಳೂರು ನಗರ ಜಿಲ್ಲೆ ಬೆಂಗಳೂರು ಸೌಹಾರ್ದಸಹಕಾರಿಗಳ ಉಪನಿಬಂಧಕರು ಸಂಘಗಳ ಜಿಲ್ಲಾ ನೋಂದಣಾಧಿಕಾರಿ,ಲೇವಾದೇವಿಗಾರರ ನಿಬಂಧಕರು , ಗಿರವಿದಾರರ ನಿಬಂಧಕರು, ಚೀಟಿ ನಿಧಿಗಳ ನಿಬಂಧಕರು.

ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ಲೇವಾದೇವಿಗಾರರ ಸಹಾಯಕ ನಿಬಂಧಕರು, ಗಿರವಿದಾರರ ಸಹಾಯಕ ನಿಬಂಧಕರು, ಸೌಹಾರ್ದ ಸಹಕಾರಿಗಳ ಸಹಾಯಕ ನಿಬಂಧಕರು, ಕೇಂದ್ರ ವಲಯ ವೃತ್ತ, ಬೆಂಗಳೂರು

ಸಹಕಾರ ಅಭಿವೃದ್ಧಿ ಅಧಿಕಾರಿಗಳು ಅಧೀಕ್ಷಕರು ಸಹಕಾರ ಸಂಘಗಳ ಹಿರಿಯ ನಿರೀಕ್ಷಕರು ಸಹಕಾರ ಸಂಘಗಳ ನಿರೀಕ್ಷಕರು ವಿಷಯ ನಿರ್ವಾಹಕರು

7.04 ಸಹಕಾರ ಸಂಘಗಳ ಉಪನಿಬಂಧಕರು ಕೇಂದ್ರ ವಲಯ, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಇವರ ಕಛೇರಿಯಲ್ಲಿ ಈ ಕೆಳಕಂಡಂತೆ ಸಿಬ್ಬಂದಿ ವರ್ಗದವರುಗಳಿರುತ್ತಾರೆ.

1. ಅಧೀಕ್ಷಕರು
2 ಸಹಕಾರ ಅಭಿವೃದ್ಧಿ ಅಧಿಕಾರಿಗಳು
3. ಸಹಕಾರ ಸಂಘಗಳ ಹಿರಿಯ ನಿರೀಕ್ಷಕರು
4. ಸಹಕಾರ ಸಂಘಗಳ ನಿರೀಕ್ಷಕರು
5. ಪ್ರಥಮ ದರ್ಜೆ ಸಹಾಯಕರು
6. ದ್ವಿತೀಯ ದರ್ಜೆ ಸಹಾಯಕರು
7. ಶೀಘ್ರಲಿಪಿಗಾರರು
8. ಹಿರಿಯ ಬೆರಳಚ್ಚುಗಾರರು
9. ವಾಹನ ಚಾಲಕರು ಹಾಗೂ ಡಿ ದರ್ಜೆ ನೌಕರರು

7.04.01 ಈ ಸಿಬ್ಬಂದಿಗಳ ವಿವರ, ಕಾರ್ಯನಿರ್ವಹಣೆ, ವಿವರ ಅನುಬಂಧ–1, ಅನುಬಂಧ–2(ಎ) ರಂತೆ ಇವೆ

7.05 ಕ್ಷೇತ್ರೀಯ ಮಟ್ಟದಲ್ಲಿ

1. ಸಹಕಾರ ಸಂಘಗಳ ಸಹಾಯಕ ನಿಬಂಧಕರು,ಕೇಂದ್ರ ವಲಯ, ವೃತ್ತ, ಬೆಂಗಳೂರು ಹಾಗೂ ಲೇವಾದೇವಿಗಾರರ ಸಹಾಯಕ ನಿಬಂಧಕರು, ಗಿರವಿದಾರರ ಸಹಾಯಕ ನಿಬಂಧಕರು, ಚೀಟಿ ನಿಧಿಗಳ ಸಹಾಯಕ ನಿಬಂಧಕರು ಮತ್ತು ಸಹಕಾರಿಗಳ ಸಹಾಯಕ ನಿಬಂಧಕರು, ಕೇಂದ್ರ ವಲಯ ವೃತ್ತ, ಬೆಂಗಳೂರು

7.06 ಈ ಕಛೇರಿಗಳಲ್ಲಿ ಆಡಳಿತಾತ್ಮಕ ಕಾರ್ಯರಚನೆ ಈ ಕೆಳಕಂಡಂತಿದೆ.

(ಅನುಬಂಧ–2ಬಿ )

(1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೆಂಗಳೂರು ಕೇಂದ್ರ ವಲಯ ವೃತ್ತ , ಬೆಂಗಳೂರು.

1. ಅಧೀಕ್ಷಕರು
2 ಮಾರಾಟಾಧಿಕಾರಿ(ಸರ್ಕಾರಿ)
3. ಸಹಕಾರ ಸಂಘಗಳ ನಿರೀಕ್ಷಕರು
4. ಪ್ರಥಮ ದರ್ಜೆ ಸಹಾಯಕರು
5. ದ್ವಿತೀಯ ದರ್ಜೆ ಸಹಾಯಕರು
6. ಬೆರಳಚ್ಚುಗಾರರು
7. ವಾಹನ ಚಾಲಕರು
8. ಜಾರಿಗಾರರು, “ಡಿ”ದರ್ಜೆ ನೌಕರರು

8. **ಮೇಲ್ವಿಚಾರಣೆಯ ಅಂಶಗಳು ಮತ್ತು ಜವಾಬ್ದಾರಿಯು ಸೇರಿದಂತೆ ತೀರ್ಮಾನ ಕೈಗೊಳ್ಳುವ ನಡವಳಿಯಲ್ಲಿ ಅನುಸರಿಸುವ ವಿಧಾನ:**

8.01.(1) ಸಹಕಾರ ಸಂಘಗಳ ಉಪನಿಬಂಧಕರು ಕೇಂದ್ರ ವಲಯ, ಬೆಂಗಳೂರು ನಗರ ಜಿಲ್ಲೆ ಇವರು ಜಿಲ್ಲಾ ಮಟ್ಟದಲ್ಲಿ ಸರ್ಕಾರದ ಆದೇಶ ಸಂ.ಸಿಓ/139/ಸಿಎಲ್ಎಂ/2010 ದಿನಾಂಕ: 17-02-2011ರ ಕ್ರಮ ಸಂಖ್ಯೆ Vರಲ್ಲಿ ದತ್ತವಾದ ಅಧಿಕಾರದನ್ವಯ

(i) ತಾಲ್ಲೂಕು ಮಟ್ಟಕ್ಕೆ ಕಡಿಮೆಯಲ್ಲದ ಸಹಕಾರ ಸಂಘಗಳ ಉಪನಿಬಂಧಕರ ಕಛೇರಿ ಬೆಂಗಳೂರು ಕೇಂದ್ರ ವಲಯ ಕಾರ್ಯವ್ಯಾಪ್ತಿಯಲ್ಲಿ ನೆಲೆಸಿರುವ ಎಲ್ಲಾ ಸಹಕಾರ ಸಂಘಗಳು ಕಲಂ 14,14ಬಿ, 30,72,72ಎ,73,74,75,98ಪಿ(2)&118ನಿಯಮ 18,22(1)(ಎ),24(2)(ಎ)&33.

(ii) ತಾಲ್ಲೂಕು ಮಟ್ಟ ಮತ್ತು ಉಪನಿಬಂಧಕರ ಕಾರ್ಯವ್ಯಾಪ್ತಿಯಲ್ಲಿ ಅಧಿಕಾರ ಪ್ರತ್ಯಾಯೋಜನೆಯನ್ವಯ ನೆಲೆಸಿರುವ ಎಲ್ಲಾ ಸಹಕಾರ ಸಂಘಗಳು (ಸಕ್ಕರೆ ಮತ್ತು ನೀರು ಬಳಕೆದಾರರ ಸಹಕಾರ ಸಂಘಗಳನ್ನು ಹೊರತುಪಡಿಸಿ) ಕಲಂ 6,7,8,10,12,14,14ಬಿ,16,17,27,28, 28ಎ(5), 29ಸಿ,29ಎಫ್(7)&(8),29ಜಿ(6),31,31ಎ,58(ಇ),64(4ಎ),(5)&(7),64,65,65ಎ,67,68,69,70,70,71,103,104,105ಎ, 110ಎ, 111,113,117,125,&128ಬಿ,ನಿಯಮಗಳು 3,6,14(1),14ಬಿ,14ಡಿ, 14ಇ,23,26,31,50,52,53,& 56 ಎಲ್ಲಾ ಪಟ್ಟಣ ಸಹಕಾರ ಬ್ಯಾಂಕುಗಳು (ಅಮಾನತ್ ಸಹಕಾರ ಬ್ಯಾಂಕ್, ಬೆಂಗಳೂರು ಹೊರತುಪಡಿಸಿ) ಉಪನಿಬಂಧಕರ ಕಾರ್ಯವ್ಯಾಪ್ತಿಯಲ್ಲಿ ನೆಲೆಸಿರುವ ಕೇಂದ್ರ ಕಛೇರಿಯಿಂದ ನೋಂದಣಿಯಾದ ಪಟ್ಟಣ ಸಹಕಾರ ಬ್ಯಾಂಕುಗಳು ಕಲಂ 69 ,70,70ಎ,71,103 ಮತ್ತು 117 ನಿಯಮಗಳು 31 ಮತ್ತು 56 .

ದತ್ತವಾದ ಅಧಿಕಾರದನ್ವಯ ತೀರ್ಮಾನ ಕೈಗೊಳ್ಳುವುದು ,ಕ್ಷೇತ್ರ ಸಿಬ್ಬಂದಿಗಳಾಗಿ ಸಹಕಾರ ಅಭಿವೃದ್ಧಿ ಅಧಿಕಾರಿ,ಹಿರಿಯ ನಿರೀಕ್ಷಕರು, ನಿರೀಕ್ಷಕರು, ಕಛೇರಿ ಅಧೀಕ್ಷಕರು, ಪ್ರಥಮ ದರ್ಜೆ ಸಹಾಯಕರು, ದ್ವಿತಿಯ ದರ್ಜೆ ಸಹಾಯಕರು, ಸಹಾಯಕರಾಗಿರುತ್ತಾರೆ. ಪತ್ರಗಳ ವಿಲೇವಾರಿಯು ವಿಷಯ ನಿರ್ವಾಹಕರಿಂದ ಪ್ರಾರಂಭವಾಗಿ, ಉಪ ನಿಬಂಧಕರ ತೀರ್ಮಾನಕ್ಕೆ ಸಲ್ಲಿಸಲ್ಪಡುತ್ತದೆ. ಕಡತಗಳ ನಿರ್ವಹಣೆ ಮಾಡುವ ಎಲ್ಲಾ ಸಿಬ್ಬಂದಿಗಳು ಅದರ ಚಾಲನೆಯಲ್ಲಿನ ಕ್ರಮಬದ್ಧತೆ ಮತ್ತು ಜವಾಬ್ದಾರಿಯಿಂದ ಹೊರಬರುವ ಫಲಿತಾಂಶವು ನಿರ್ವಹಿಸುವ ಕರ್ತವ್ಯಕ್ಕೆ ಅನುಗುಣವಾಗಿರುತ್ತದೆ.

8.02. ಉಪವಿಭಾಗದ ಸಹಾಯಕ ನಿಬಂಧಕರು, ಕೇಂದ್ರ ವಲಯವೃತ್ತ ಬೆಂಗಳೂರು ಇವರ ಕಛೇರಿಯಲ್ಲಿ ಇಲಾಖೆಯ ವ್ಯವಹಾರಕ್ಕೆ ಸಂಬಂಧಪಟ್ಟಂತೆ ಜವಾಬ್ದಾರರಾಗಿರುತ್ತಾರೆ. ಮತ್ತು ಇವರು ಅವರ ಕಛೇರಿಯ ಮುಖ್ಯಸ್ಥರಾಗಿ ಕಾರ್ಯನಿರ್ವಹಿಸುತ್ತಿರುತ್ತಾರೆ. ಸಹಾಯಕ ನಿಬಂಧಕರು ತೆಗೆದುಕೊಳ್ಳುವ ಎಲ್ಲಾ ತೀರ್ಮಾನಗಳಿಗೆ ಅವರೇ ಜವಾಬ್ದಾರರಾಗಿರುತ್ತಾರೆ. ಜಿಲ್ಲಾ ಮಟ್ಟದ ಕಛೇರಿಯಂತೆಯೇ ಇವರ ಕಾರ್ಯನಿರ್ವಹಣೆಗೆ ಕ್ಷೇತ್ರ ಸಿಬ್ಬಂದಿಗಳು, ಲಿಪಿಕ ಸಿಬ್ಬಂದಿಗಳು ಹಾಗೂ ಮಾರಾಟಾಧಿಕಾರಿ(ಸರ್ಕಾರಿ) ಇವರು ಸಹಾಯಕರಾಗಿರುತ್ತಾರೆ. ಸಹಾಯಕ ನಿಬಂಧಕರು, ಕೇಂದ್ರ ವಲಯ ವೃತ್ತದ ಹಂತದಲ್ಲಿ ಕರ್ತವ್ಯಗಳನ್ನು ನಿರ್ವಹಿಸಲು ಕ್ಷೇತ್ರ ಸಿಬ್ಬಂದಿಗಳು ಮತ್ತು ಕಛೇರಿ ಸಿಬ್ಬಂದಿಗಳು ಸಹಾಯಕರಾಗಿರುತ್ತಾರೆ. ವಿಷಯ ನಿರ್ವಾಕರು ಮತ್ತು ಮೇಲ್ವಿಚಾರಕ ಸಿಬ್ಬಂದಿಗಳು ಅವರುಗಳು ಕರ್ತವ್ಯ ನಿರ್ವಹಣೆಯ ಫಲಿತಾಂಶಕ್ಕೆ ಜವಾಬ್ದಾರರಾಗಿರುತ್ತಾರೆ. ಮತ್ತು ಮೇಲಧಿಕಾರಿಗಳಿಗೂ ಇದಕ್ಕೆ ಸಂಬಂಧಪಟ್ಟಂತೆ ಜವಾಬ್ದಾರಿ ಹೊಂದಿರುತ್ತಾರೆ.

**9.01 ಇಲಾಖೆಯಲ್ಲಿ ಜಿಲ್ಲಾ ಮಟ್ಟದ ಕಛೇರಿಯಲ್ಲಿ ತನ್ನ ಕಾರ್ಯಗಳನ್ನು ನಿರ್ವಹಿಸಲು ರೂಪಿತವಾಗಿರುವ ಮಾರ್ಗಸೂಚಿಗಳು:**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರಲ್ಲಿ ಇಲಾಖೆಯ ಪರಿಣಾಮಕಾರಿ ಕಾರ್ಯನಿರ್ವಹಣೆಗೆ ವಿವಿಧ ಹಂತಗಳನ್ನು ರೂಪಿಸಿದೆ. ಸಾಮಾನ್ಯವಾಗಿ ವ್ಯವಹಾರದ ಜರೂರು ವಿಲೇವಾರಿಗೆ ಅಂದರೆ ಕಾಲವಿಳಂಭಕ್ಕೆ ಯಾವುದೇ ಅವಕಾಶ ನೀಡದೇ ಆದ್ಯತೆಯ ಮೇಲೆ ಪತ್ರಗಳನ್ನು, ಕಡತಗಳನ್ನು ಮಂಡಿಸುವುದು, ತುರ್ತು ಮತ್ತು ಮುಖ್ಯವಾದ ಆದ್ಯತೆಯ ವಿಷಯವನ್ನು ಸಾಮಾನ್ಯವಾಗಿ ಅಂದಂದೇ ನಿರ್ವಹಿಸಲು ಅಗತ್ಯವಾದ ಕ್ರಮಗಳನ್ನು ಅನುಸರಿಸಲಾಗುವುದು.

9.02. ಪತ್ರಗಳ ಮತ್ತು ಕಡತಗಳ ವಿಲೇವಾರಿಗೆ , ಕಛೇರಿ ಕಾರ್ಯವಿಧಾನ ಕೈಪಿಡಿಯಲ್ಲಿ ರೂಪಿಸಿದ ಮಾರ್ಗಸೂಚಿಯಂತೆ ಪರಿಣಾಮಕಾರಿಯಾಗಿ ಪುನರ್ ವಿಲೋಕನ ಮತ್ತು ಶೀಘ್ರ ವಿಲೇವಾರಿಗೆ ಕಾರ್ಯನಿರ್ವಹಣೆಯನ್ನು ಗುರುತಿಸಲು ಅನುಪಾಲನಾ ಪದ್ದತಿ ಜಾರಿಯಲ್ಲಿದೆ. ಕಛೇರಿಯ ಮಾರ್ಗಸೂಚಿಗಳ ಪ್ರಕಾರ, ಅವರವರ ಕಾರ್ಯಗಳನ್ನು ನಿರ್ವಹಿಸಲು ಮತ್ತು ಕರ್ತವ್ಯಗಳನ್ನು ಚುರುಕಾಗಿ ಪರಿಣಾಮಕಾರಿಯಾಗಿ ಮತ್ತು ಪಾರದರ್ಶಕವಾಗಿರುವುದು ಕಡ್ಡಾಯವಾಗಿದೆ.

9.03. ಉಪನಿಬಂಧಕರು ಅರೆನ್ಯಾಯಿಕ ಪ್ರಾಧಿಕಾರಿಗಳಾಗಿ ಸಹಕಾರ ಸಂಘಗಳಲ್ಲಿ, ಸೌಹಾರ್ದ ಸಹಕಾರಿಗಳಲ್ಲಿ, ಹಾಗೂ ಚೀಟಿನಿಧಿ ಕಾಯ್ದೆಯನ್ನಯ ಚೀಟಿಸಂಸ್ಥೆಗಳಲ್ಲಿ ಉದ್ಭವಿಸುವ ಮತ್ತು ದಾವೆಗೆ ಅದಕ್ಕೆ ಸಂಬಂಧಿಸಿದ ವಿಷಯಗಳನ್ನು ನ್ಯಾಯಾಲಯ ಕಲಾಪದ ಮೂಲಕ ಮತ್ತು ಇತರೆ ಅರೆ ನ್ಯಾಯಿಕ ವಿಷಯಗಳಂತೆ ಇರುವ ಪ್ರಕರಣಗಳನ್ನು ನಿಯಮಾನುಸಾರ ಮತ್ತು ನಿಗಧಿತ ಕ್ರಮಗಳನ್ನು ಅನುಸರಿಸಿ ವಿಲೇವಾರಿ ಮಾಡಲಾಗುವುದು.

9.04. ಉಪನಿಬಂದಕರಿಗೆ ದತ್ತವಾದ ಅಧಿಕಾರವನ್ನು ಚಲಾಯಿಸಲು ಸಂಬಂಧಪಟ್ಟಂತೆ ಸರ್ಕಾರವು ರೂಪಿಸಿರುವ ಮಾರ್ಗಸೂಚಿಗಳನ್ನು ಮತ್ತು ಕಚೇರಿ ಕಾರ್ಯ ವಿಧಾನ ಕೈಪಿಡಿಯನ್ವಯ ನಿರ್ಧಿಷ್ಟಪಡಿಸಿರುವ ಮಾರ್ಗಸೂಚಿಗಳನ್ನು ಕಡ್ಡಾಯವಾಗಿ ಅನುಸರಿಸಲಾಗುವುದು.

9.05. ನಿರ್ವಹಣೆ, ಜವಾಬ್ದಾರಿ, ಪಾರದರ್ಶಕತೆ ಮತ್ತು ಪರಿಣಾಮಕಾರಿ ಆಡಳಿತ ಇವುಗಳನ್ನು ಇಲಾಖೆಯು ಪ್ರಮುಖ ಮಾರ್ಗಸೂಚಿಗಳಾಗಿದ್ದು, ಇವುಗಳನ್ನು ಕಾನೂನುಬದ್ದವಾಗಿ ನಿಗಧಿಪಡಿಸಿರುವ ಮಾರ್ಗಸೂಚಿಗಳ ಜೊತೆಯಲ್ಲಿ ಅನುಸರಿಸಲಾಗುವುದು.

**10.01 ಕಛೇರಿ ಸಿಬ್ಬಂದಿಗಳು ತಮ್ಮ ಕಾರ್ಯನಿರ್ವಹಣೆಯಲ್ಲಿ ಉಪಯೋಗಿಸುವ ನಿಯಮಗಳು, ನಿಯಂತ್ರಣಗಳು, ಸೂಚನೆಗಳು, ಮ್ಯಾನ್ಯೂಯಲ್ ಮತ್ತು ದಾಖಲೆಗಳು ಅಥವಾ ಅವುಗಳ ನಿಯಂತ್ರಣಗಳು.**

ಉಪನಿಬಂಧಕರ ಕಛೇರಿಯ ಅಧಿಕಾರಿಗಳು, ಸಿಬ್ಬಂದಿಗಳು ಅಗತ್ಯವಾದ ದಾಖಲೆಗಳನ್ನು ಕೈಪಿಡಿಗಳನ್ನು ನಿರ್ವಹಿಸುತ್ತಿದ್ದಾರೆ.

1. ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959.
2. ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960
3. ಕರ್ನಾಟಕ ಸೌಹಾರ್ದ ಸಹಕಾರಿ ಕಾಯ್ದೆ 1997 ಮತ್ತು ನಿಯಮಗಳು 2004.
4. ಚೀಟಿ ನಿಧಿ ಕಾಯ್ದೆ, 1982 ಚೀಟಿ ನಿಧಿ(ಕರ್ನಾಟಕ)ನಿಯಮಗಳು 1983
5. ಗಿರವಿದಾರರ ಕಾಯ್ದೆ 1961 ಮತ್ತು ಗಿರವಿದಾರರ ನಿಯಮಗಳು 1966
6. .ಕರ್ನಾಟಕ ಲೇವಾದೇವಿಗಾರರ ಕಾಯ್ದೆ 1961 ಕರ್ನಾಟಕ ಲೇವಾದೇವಿಗಾರರ ನಿಯಮಗಳು 1965
7. ಕರ್ನಾಟಕ ಮೀತಿಮೀರಿದ ಬಡ್ಡಿ ವಿಧಿಸುವುದನ್ನು ನಿಷೇದಿಸುವ ಕಾಯ್ದೆ 2004
8. ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960.ಮತ್ತು ನಿಯಮಗಳು 1961.
9. ಇತರೆ.

**10.02 ನಿರ್ವಹಿಸುವ ಇತರೆ ಶಾಸನ ಬದ್ದ ಕಾಯ್ದೆಗಳು, ನಿಯಮಗಳು**

1. ಕರ್ನಾಟಕ ನಾಗರಿಕ ಸೇವಾ ನಿಯಮಗಳು 1958
2. ಕರ್ನಾಟಕ ನಾಗರಿಕ (ವೈದ್ಯಕೀಯ ಹಾಜರಾತಿ )_ನಿಯಮಗಳು 1963
3. ಕರ್ನಾಟಕ ನಾಗರಿಕ (ಕಾಲಮಿತಿ ಬಡ್ತಿ) ನಿಯಮಗಳು
4. ಕರ್ನಾಟಕ ಆಯವ್ಯಯ ಕೈಪಿಡಿ
5. ಸಾದಿಲ್ವಾರು ವೆಚ್ಚದ ಕೈಪಿಡಿ
6. ಕರ್ನಾಟಕ ಆರ್ಥಿಕ ಸಂಹಿತೆ ಸಂಪುಟ–1 , ಸಂಪುಟ–2
7. ಕರ್ನಾಟಕ ಖಜಾನೆ ಸಂಹಿತೆ ಸಂಪುಟ–1,2
8. ಕರ್ನಾಟಕ ನಾಗರೀಕ ಸೇವಾ (ಹಿರಿಯ ವೇತನ ಶ್ರೇಣಿಗೆ ಸ್ವಯಂಚಾಲಿತ ವಿಶೇಷ ಬಡ್ತಿ)ನಿಯಮಗಳು
9. ಸಿ.ಆ.ಸು.ಇಲಾಖೆಯು ಪ್ರಕಟಿಸಿರುವ ಸೇವಾ ನಿಯಮಗಳು
10. ಪ್ರಮುಖ ಸರ್ಕಾರಿ ಆದೇಶಗಳು , ಸರ್ಕಾರದ , ಸಿಆಸು ಮತ್ತು ಹಣಕಾಸು ಇಲಾಖೆಯು ಪ್ರಕಟಿತ ಮ್ಯಾನ್ಯಯಲ್
11. ಕರ್ನಾಟಕ ಸರ್ಕಾರಿ ನೌಕರರ ಸಮೂಹ ವಿಮಾ ಯೋಜನೆ ನಿಯಮಗಳು
12. ಕರ್ನಾಟಕ ಸರ್ಕಾರಿ ನೌಕರರ ( ಪರೀಕ್ಷಾರ್ಥ ಅವಧಿ)ನಿಯಮಗಳು ಕರ್ನಾಟಕ ನಾಗರೀಕ ಸೇವ (ನಡತೆ) ನಿಯಮಗಳು
13. ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ, ಮತ್ತು ಮೇಲು ಸಹಿ )ನಿಯಮಗಳು
14. ಸಾಮಾನ್ಯ ಭವಿಷ್ಯ ನಿಧಿ ನಿಯಮಗಳು .

**10.03 ಕಛೇರಿಯಲ್ಲಿ ಕೆಳಕಂಡ ದಾಖಲಾತಿಗಳನ್ನು ನಿರ್ವಹಿಸಲಾಗುತ್ತಿದೆ**

1. ಸ್ವೀಕೃತಿ ವಹಿ ( ಯಿಂದ ವಹಿ), ರವಾನೆ ವಹಿ ( ಗೆ ವಹಿ ) ಸ್ಥಳೀಯ ಬಟವಾಡೆ ವಹಿ
2. ಸಿಬ್ಬಂದಿಗಳ ಸೇವಾ ಪುಸ್ತಕಗಳು,

3. ಸಿಬ್ಬಂದಿಗಳ ಸೇವಾ ಪುಸ್ತಕದ ಚಲನಚಲನ ವಹಿ, ಮುಕ್ತಾಯಗೊಂಡ ಸೇವಾಪುಸ್ತಕಗಳ ವಹಿ
4. ಸಿಬ್ಬಂದಿಗಳ ವಾರ್ಷಿಕ ವೇತನ ಬಡ್ತಿ ಪರಿಶೀಲನಾ ವಹಿ
5. ಸಿಬ್ಬಂದಿಗಳ ಕಾರ್ಯನಿರ್ವಹಣಾ ವರದಿಗಳ ಪರಿಶೀಲನಾವಹಿ
6. ಸಿಬ್ಬಂದಿಗಳ ಆಸ್ತಿ–ಜವಾಬ್ದಾರಿ ಪರಿಶೀಲನಾ ವಹಿ
7. ಸಾಂದರ್ಭಿಕ ರಜೆ ವಹಿ
8 ನಗದು ಪುಸ್ತಕ , ವೇತನ ಬಟವಾಡೆ ಪುಸ್ತಕ,
9. ಸಾದಿಲ್ವಾರು ವೆಚ್ಚದ ಬಿಲ್ಲುಗಳ ವಹಿ , ಪ್ರಯಾಣ ಭತ್ಯೆ ಬಿಲ್ಲುಗಳ ವಹಿ
10. ಬಿಲ್ಲುಗಳ ನಗದು ಪರಿವರ್ತನೆ ವಹಿ( ಎನ್ ಕ್ಯಾಷ್‌ಮೆಂಟ್ ರಿಜಿಸ್ಟರ್) ಚಕ್ಕುಗಳ ವಹಿ ವಾಹನ ಲಾಗ್ ಪುಸ್ತಕ
11. ವಿಷಯ ವಹಿಗಳು , ವೈಯಕ್ತಿಕ ವಹಿಗಳು
12. ಸಿಬ್ಬಂದಿಗಳ ಚಲನ–ವಲನ ವಹಿ, ಕಛೇರಿ ಆದೇಶದ ವಹಿ
13. ಲೇವಾದೇವಿ/ಗಿರವಿದಾರರ ಪರವಾನಿಗೆ, ಚೀಟಿ ನಿಧಿ, ಸಂಬಂಧಪಟ್ಟಂತೆ ವಹಿಗಳು.
14 ದಾಖಲೆಗಳ ವಹಿ ,ಇತ್ಯಾದಿ ಕಛೇರಿಯಲ್ಲಿ ಅವಶ್ಯಕವಾಗಿ ನಿರ್ವಹಿಸಬೇಕಾದ ವಹಿಗಳು

10.04 **ನಿರ್ವಹಿಸಲ್ಪಡುವ ಇತರೆ ಕಡತಗಳು/ದಾಖಲೆಗಳು**

1. ಸಹಕಾರ ಸಂಘಗಳ ಮತ್ತು ಸಂಘಗಳ ನೋಂದಣಿ ವಹಿ
2. ನೋಂದಣಿಗೆ ಸಂಬಂಧಪಟ್ಟ ಕಡತಗಳು
3 ಮಹಾಸಭೆ ನಡೆಸುವ ಬಗ್ಗೆ ಕಡತಗಳು
4. ಹಣ ದುರುಪಯೋಗ ಪ್ರಕರಣಗಳ ತ:ಖ್ತೆ
5. ಸಹಕಾರ ಸಂಘಗಳ ಆಡಳಿತ ಮಂಡಳಿ ರದ್ದತಿ ವಹಿ, ಕಡತಗಳು, ತ:ಖ್ತೆಗಳು
6. ಯೋಜನಾ ಕಾರ್ಯಕ್ರಮಗಳ ಅನುಷ್ಠಾನದ ವಿವರಗಳ ಕಡತ.
7. ಪರಿವೀಕ್ಷಣೆ, ವಿಚಾರಣೆಗೆ ಆದೇಶಿಸಿರುವ ವಿವರಗಳ ವಹಿ, ಕಡತಗಳು
8. ವಿವಿಧ ಆಡಳಿತಾತ್ಮಕ ಮತ್ತು ಶಾಸನಾತ್ಮಕ ವಿಷಯಗಳಿಗೆ ಸಂಬಂಧಿಸಿದಂತೆ ತೆರೆಯಲಾದ ಕಡತಗಳು, ವಹಿಗಳು
9. ಇತರೆ ಮತ್ತು ಸಾಮಾನ್ಯ ವಿಷಯಗಳಿಗೆ ಸಂಬಂಧಿಸಿದಂತೆ ತೆರೆಯಲಾದ ಕಡತಗಳು ಮತ್ತು ವಹಿಗಳು ,ದಾಖಲಾತಿಗಳು
10 ಅಧಿಕಾರಿಗಳು ನಡೆಸಿದ ಪರಿವೀಕ್ಷಣಾ ವರದಿಗಳು
11, ಕಾರ್ಯವ್ಯಾಪ್ತಿಯು ಸಹಕಾರ ಸಂಘಗಳ ಲೆಕ್ಕಪರಿಶೋಧನಾ ವರದಿಗಳು, ಲೆಕ್ಕಪರಿಶೋಧನಾ ವರದಿಗಳ ಮೇಲೆ ಕಲಂ 68ರ ಪುನರ್ ವಿಲೋಕನ ಆದೇಶಗಳು .
12. ಕಛೇರಿ ಸಿಬ್ಬಂದಿಗಳ ರಜೆ, ವೇತನ ಬಡ್ತಿ, ಇತ್ಯಾದಿಗಳಿಗೆ ಸಂಬಂಧಪಟ್ಟಂತೆ ನೌಕರರ ವೈಯಕ್ತಿಕ ಕಡತಗಳು
13. ಕಡತ ವಿಲೇವಾರಿ ವಹಿ,
14 ಇತರೆ ವಿಷಯಗಳ ಬಗ್ಗೆ ಕಾಲಿಕ ಪ್ರಗತಿ ತ:ಖ್ತೆಗಳು , ಪುನರ್ ವಿಲೋಕನ ಮತ್ತು ಇತರೆ ವ್ಯವಹಾರಿಕ ಕಡತಗಳು
15. ಆಡಳಿತ, ವ್ಯಾಜ್ಯ, ಲೇವಾದೇವಿ/ಗಿರವಿದಾರರ ಪರವಾನಿಗೆ ಸಂಬಂಧಪಟ್ಟಂತೆ ಚೀಟಿ ನಿಧಿ, ಪತ್ತು, ಪತ್ತೇತರ, ಗೃಹ, ಬಳಕೆ ಇತರೆ ಸಹಕಾರ ಸಂಘಗಳ ಬಗ್ಗೆ ಪ್ರಗತಿ, ಕಾರ್ಯನಿರ್ವಹಣೆ ಇತರೆ ವಿಷಯಗಳ ಪತ್ರ ವ್ಯವಹಾರದ ಕಡತಗಳು ಮತ್ತು ಸಂಬಂಧಿಸಿದ ಕಡತಗಳು

**10.5 ಕಛೇರಿಯ ನಿಯಂತ್ರಣದಲ್ಲಿ ಹೊಂದಿರುವ ದಾಖಲೆಗಳ ವರ್ಗಗಳ ತ:ಖ್ತೆ**

ಕಛೇರಿಯಲ್ಲಿ ನಿರ್ವಹಿಸಲ್ಪಟ್ಟಿರುವ ದಾಖಲೆಗಳ ವರ್ಗಗಳ ವಿವರಗಳನ್ನು ಈ ಕೈಪಿಡಿಯ ವಿವರದಂತೆ ನಮೂದಿಸಿದೆ. ಸದರಿ ಪಟ್ಟಿಯಲ್ಲದೆ ಕಛೇರಿ ಕೈಪಿಡಿಯಲ್ಲಿ ನಮೂದಿಸಿರುವಂತೆ ನಿರ್ಧಿಷ್ಟಪಡಿಸಿರುವ ಅಗತ್ಯ ವಹಿಗಳನ್ನು ನಿರ್ವಹಿಸಿರುವುದನ್ನು ಸಹ ನಮೂದಿಸಿದೆ. ನಿರ್ಣಯಗಳಿಗೆ

ಸಂಬಂಧಿಸಿದ ದಾಖಲೆಗಳು ಅವುಗಳ ಕಾರ್ಯನಿರ್ವಹಣೆ ಆಡಳಿತಾತ್ಮಕ/ಶಾಸನಬದ್ಧ/ ಅರೆ ನ್ಯಾಯಿಕ ರೂಪವಾಗಿರುತ್ತದೆ. ಈ ದಾಖಲೆಗಳನ್ನು ವರ್ಗೀಕರಿಸಲಾಗಿದೆ. ಮತ್ತು ಆಡಳಿತ ನಿರ್ವಹಿಸಲ್ಪಟ್ಟಿದೆ.

10.6 ಕಛೇರಿಗೆ ಅರೆ ನ್ಯಾಯಿಕ ಜವಾಬ್ದಾರಿಯನ್ನು ವಹಿಸಿರುವುದರಿಂದ ಸದರಿ ಕಾರ್ಯನಿರ್ವಹಣೆಗೆ ಸೂಕ್ತ ಮತ್ತು ಅಗತ್ಯ ಶಾಸನಬದ್ಧ ಮಾರ್ಗಸೂಚನೆಗಳನ್ನು ಪಾಲಿಸಲಾಗುತ್ತಿದೆ. ನಿಯಮಗಳು, ನಿಯಂತ್ರಕಗಳು, ಮ್ಯಾನ್ಯುಯಲ್ ಮತ್ತು ಸರ್ಕಾರದ ಅಧಿಸೂಚನೆಗಳ ಮೂಲಕ ಇಲಾಖೆಯ ಮುಖ್ಯಸ್ಥರು ಹಾಗೂ ಮೇಲಧಿಕಾರಿಗಳ ಮಾರ್ಗದರ್ಶನವಿದೆ. ಆದಾಗ್ಯೂ ಕಛೇರಿಯ ಕಡ್ಡಾಯವಾಗಿ ಕಾಯ್ದೆ, ನಿಯಮಗಳು ಮತ್ತು ನಿಯಂತ್ರಕಗಳನ್ನು ಅನುಸರಿಸಿರುವುದರಿಂದ ಸಾರ್ವಜನಿಕರೊಂದಿಗೆ ಸಮಾಲೋಚಿಸುವ ಪದ್ಧತಿ ಇರುವುದಿಲ್ಲ.

10.7. ಮಂಡಳಿಗಳು, ಪರಿಷತ್ತುಗಳು, ಸಮಿತಿಗಳು ಮತ್ತು ಇತರೆ ಅಂಗ ರಚನೆಗಳು ಇಬ್ಬರು ಅಥವಾ ಹೆಚ್ಚು ಸದಸ್ಯರುಗಳನ್ನು ಅದರ ರಚನೆಯ ಭಾಗವಾಗಿ ಹೊಂದಿರುವುದು ಅಥವಾ ಅದಕ್ಕೆ ಮಾರ್ಗದರ್ಶನ ನೀಡುವ ಉದ್ದೇಶಕ್ಕಾಗಿ ಮತ್ತು ಅಂತಹ ಮಂಡಳಿಗಳು , ಪರಿಷತ್ತುಗಳ ಸಮಿತಿಗಳು ಮತ್ತು ಇತರೆ ಅಂಗ ರಚನೆಗಳ ಸಭೆಗಳಲ್ಲಿ ಸಾರ್ವಜನಿಕರಿಗೆ ಅವಕಾಶವಿದೆಯೇ? ಅಥವಾ ಅಂತಹ ಸಭೆಯ ನಡವಳಿಗಳು ಸಾರ್ವಜನಿಕರಿಗೆ ಲಭ್ಯವಿದೆಯೇ?

**ಮಾರ್ಗದರ್ಶನ ನೀಡುವ ಉದ್ದೇಶಕ್ಕಾಗಿ ಇಲಾಖಾ ಕಛೇರಿಗಳಲ್ಲಿ ಅಂತಹ ಮಂಡಳಿಗಳು, ಪರಿಷತ್ತುಗಳು, ಸಮಿತಿಗಳು ಮತ್ತು ಇತರೆ ಅಂಗ ರಚನೆಗಳು ಇರುವುದಿಲ್ಲ.**

11. **ಕಛೇರಿಯ ಅಧಿಕಾರಿಗಳ ಮತ್ತು ನೌಕರರ ಪಟ್ಟಿ**

ಕಛೇರಿಯ ಅಧಿಕಾರಿಗಳ ಮತ್ತು ನೌಕರರ ಯಾದಿಯನ್ನು ಈ ಕೈಪಿಡಿಯೊಂದಿಗೆ ಲಗತ್ತಿಸಿದೆ ಅನುಬಂಧ ' 2ಎ' ರಂತಿದೆ.

12. **ಕಛೇರಿಯ ಪ್ರತಿ ಅಧಿಕಾರಿ/ನೌಕರರ ಮಾಸಿಕ ಸಂಭಾವನೆ , ವಿವರಗಳು ಅದರ ನಿಯಂತ್ರಣದಲ್ಲಿನ ಅವಕಾಶದಂತೆ ಪರಿಹಾರದ ಪದ್ಧತಿಯಲ್ಲಿನ ಸಂಭಾವನೆಯೂ ಸೇರಿದಂತೆ:–**

ಸರ್ಕಾರವು ನಿಗಧಿಪಡಿಸಿರುವಂತೆ, ಅಧಿಕಾರಿಗಳು/ ನೌಕರರು ಮಾಸಿಕ ಸ್ವೀಕರಿಸುವ ಸಂಭಾವನೆ ವಿವರಗಳನ್ನು ಒಳಗೊಂಡಿರುವ ತ:ಖ್ತೆಯನ್ನು ಈ ಕೈಪಿಡಿಯ ಜೊತೆಗೆ ಲಗತ್ತಿಸಿರುವ ಅನುಬಂಧ 3 ರಲ್ಲಿದೆ. ಸರ್ಕಾರವು ಕಾಲಕಾಲಕ್ಕೆ ಹೊರಡಿಸಿರುವ ಸರ್ಕಾರಿ ಆದೇಶಗಳು/ ಅಧಿಸೂಚನೆಗಳನ್ವಯ ಇರುವ ಸಂಭಾವನೆಯನ್ನು ಈ ಅಧಿಕಾರಿಗಳು ಮತ್ತು ನೌಕರರು ಪಡೆಯುತ್ತಿದ್ದಾರೆ.

13. ಪ್ರತಿಯೊಂದು ಏಜೆನ್ಸಿಗೆ ಆಯವ್ಯಯ ಹಂಚಿಕೆ ಎಲ್ಲಾ ಯೋಜನೆಗಳ ವಿವರಗಳನ್ನು ನಮೂದಿಸುವುದು, ಉದ್ದೇಶಿತ ಖರ್ಚುಗಳು ಮತ್ತು ವಿತರಣೆ ಬಗ್ಗೆ ವರದಿ

2010–11ನೇ ಸಾಲಿನ ಆಯವ್ಯಯದ ಹಂಚಿಕೆ ಮತ್ತು ವೆಚ್ಚದ ವಿವರಗಳ ತ:ಖ್ತೆಗಳು ಲಗತ್ತಿಸಿರುವ ಅನುಬಂಧ 4 ರಂತಿದೆ.

14. **ಸಹಾಯಧನದ ಕಾರ್ಯಕ್ರಮಗಳ ಅನುಷ್ಟಾನದ ವಿಧಾನ, ಹಂಚಿಕೆ ಯಾದ ಮೊಬಲಗು ಸೇರಿದಂತೆ ಮತ್ತು ಅಂತಹ ಕಾರ್ಯಕ್ರಮದ ಫಲಾನುಭವಿಗಳ ವಿವರಗಳು;–**

ವಿವಿಧ ಯೋಜನೆಗಳು, ಕಾರ್ಯಕ್ರಮಗಳು, ಹಂಚಿಕೆ ಮತ್ತು ವೆಚ್ಚದ ವಿವರಗಳನ್ನು ಅನುಬಂಧ 5ಎ ಮತ್ತು 5ಬಿ ರಲ್ಲಿ ವಿವರಿಸಿದಂತಿದೆ.

14.01 ಹಾಗೂ ಸಹಾಯಧನ ಹಂಚಿಕೆ ಮಾಡಿರುವ ಮೊಬಲಗು, ಸರ್ಕಾರ ಇಲಾಖಾ ಮುಖ್ಯಸ್ಥರು, ಮಂಜೂರು ಮಾಡುತ್ತದೆ. ಅದನ್ನು ಡ್ರಾ ಮಾಡಿ ಫಲಾನುಭವಿ ಸಹಕಾರ ಸಂಘದ ಖಾತೆಗಳ ಮೂಲಕ ಜಮಾ ನೀಡಲಾಗುತ್ತಿದೆ.

15. **ರಿಯಾಯಿತಿಗಳನ್ನು ಸ್ವೀಕರಿಸಿರುವ ವಿವರಗಳು, ಅನುಮತಿಗಳು ಅಥವಾ ಮಂಜೂರು ಮಾಡಿರುವುದು.**

15.01 ಸಂಬಂಧಿಸಿದ ಯೋಜನೆಯ ಕಾರ್ಯಕ್ರಮದಲ್ಲಿ ನಿರ್ಧಿಷ್ಠಪಡಿಸಿರುವ ಷರತ್ತು ಮತ್ತು ನಿಬಂಧನೆಗಳ ಪ್ರಕಾರ ಸ್ವೀಕರಿಸಿರುವವರು ಸಹಕಾರ ಸಂಘಗಳು/ ಸಹಕಾರ ಸದಸ್ಯರುಗಳು ಫಲಾನುಭವಿಗಳಾಗಿರುತ್ತಾರೆ. ಆದರೆ ಯಾವುದೇ ಅನುಮತಿ ನೀಡುವ ಯೋಜನೆಗಳಿರುವುದಿಲ್ಲ. ಇಲಾಖೆಯ ಕ್ರಿಯಾ ಯೋಜನೆಯ ಕಾರ್ಯಕ್ರಮದಲ್ಲಿ ಆರ್ಥಿಕ ನೆರವನ್ನು, ಷೇರು ಬಂಡವಾಳ ಸಾಲ ಮತ್ತು ಸಹಾಯಧನದ ರೂಪದಲ್ಲಿ ಅರ್ಹ ಸಹಕಾರ ಸಂಘಗಳಿಗೆ ನೀಡಲಾಗುತ್ತಿದೆ.

15.02 ಯೋಜನೆ: ಕಾರ್ಯಕ್ರಮಗಳಲ್ಲಿ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದವರು, ಹಿಂದುಳಿದ ವರ್ಗದವರು ಮತ್ತು ಮಹಿಳೆಯವರು ಸಹಕಾರ ಸಂಘಗಳಲ್ಲಿ ಸದಸ್ಯರಾಗಲು ಆರ್ಥಿಕ ನೆರವು ನೀಡಲಾಗುತ್ತಿದೆ.

